ಗೀತಾ ಸಾಹಿತ್ಯ : ೨.

# ನಮ್ಮ ಕಾಗದಗಳು

( ಅಮೇರಿಕಾ-ಭಾರತಗಳ ಸಿಂಹಾವಲೋಕನ )

---

**ನಾಡಿಗ ಕೃಷ್ಣಮೂರ್ತಿ**
ಸಂಪಾದಕರು

ಮುನ್ನುಡಿ ಬರೆದವರು
**ಶ್ರೀ. ಡಿ. ವಿ. ಗುಂಡಪ್ಪನವರು**

---

**೧೯೫೦**
**ಗೀತಾ ಸಾಹಿತ್ಯ ಮಂದಿರ**
ಮಲ್ಲೇಶ್ವರಂ, ಬೆಂಗಳೂರು—೩.

**ಬೆಲೆ : ಹನ್ನೆರಡಾಣೆ.**

# ಅರಿಕೆ

"ನಮ್ಮ ಕಾಗದಗಳು", ನಮ್ಮವೇ. ಶ್ರೀ. ಹೆಚ್. ವೈ. ಶಾರದಾಪ್ರಸಾದ್, ಶ್ರೀ. ಟಿ. ಎಸ್. ಸಂಜೀವರಾವ್, ನನ್ನ ಆಪ್ತ ಗೆಳೆಯರು. 'ಶೌರಿ' ಎನ್ನುವವರೇ ಶ್ರೀ. ಶಾರದಾಪ್ರಸಾದ್. ಕನ್ನಡಿಗರಿಗೆ ಅವರು ಹೊಸಬರೇನೂ ಅಲ್ಲ. ಈಗವರು ಬೊಂಬಾಯಿನ 'ನ್ಯಾಷನಲ್ ಸ್ಟ್ಯಾಂಡರ್ಡ್' ಪತ್ರಿಕೆಯಲ್ಲಿ 'ಸುದ್ದಿ' ವಿಭಾಗದ ಸಂಪಾದಕರು. 'ಸಂಜೀವ' ಎನ್ನುವವರೇ ಶ್ರೀ. ಸಂಜೀವರಾವ್. ಸಣ್ಣ ಕಥೆ ಬರೆಯುವುದರಲ್ಲಿ ಇವರದು ಪಳಗಿದ ಕೈ. ಇವರು ಬೊಂಬಾಯಿನ 'ಭಾರತ್' ಎಂಬ ಪತ್ರಿಕೆಯಲ್ಲಿ 'ವ್ಯಾಪಾರ' ವಿಭಾಗದಲ್ಲಿ ಉಪಸಂಪಾದಕರಾಗಿದ್ದಾರೆ. ನಾನು ಅಮೇರಿಕೆಯಲ್ಲಿದ್ದಾಗ ಇವರಿಬ್ಬರಿಗೂ ಬರೆದ ಪತ್ರಗಳೇ ಈ 'ನಮ್ಮ ಕಾಗದಗಳು'. ಕಾಗದಗಳಲ್ಲೆಲ್ಲಾ ಆತ್ಮೀಯತೆ ಕಂಡುಬಂದಿದೆ. ಪತ್ರ ಸಾಹಿತ್ಯದಲ್ಲಿ ಈ ಆತ್ಮೀಯತೆಗೆ ಸ್ಥಾನವಿದ್ದೇ ಇರಬೇಕು. ಇಲ್ಲದಿದ್ದರೆ ಅವು ನಮ್ಮ ಕಾಗದಗಳಾಗಲಾರವು.

ಆಶೀರ್ವಾದ ಪೂರ್ವಕವಾಗಿ ನಮ್ಮನ್ನು ಹರಸಿ ಈ ಪುಸ್ತಕಕ್ಕೆ ಮುನ್ನುಡಿ ಕಾಗದ ಬರೆದುಕೊಟ್ಟ, ಸುಪ್ರಸಿದ್ಧ ಸಾಹಿತಿಗಳೂ, ಹಿರಿಯ ರಾಜಕಾರಣ ಪಟುಗಳೂ, **ಕನ್ನಡ ನಾಡಿನ ವಿದ್ಯಾರಣ್ಯರೂ ಆದ ಶ್ರೀ. ಡಿ. ವಿ. ಗುಂಡಪ್ಪನವರಿಗೆ** ಅತ್ಯಂತ ಚಿರಋಣಿಗಳು.

ಈ ಪುಸ್ತಕದ ಕರಡುಪ್ರತಿಯನ್ನು ಓದಿ, ಮುದ್ರಣಕ್ಕನುಕೂಲವಾಗುವಂತೆ ಅಂದವಾಗಿ ಬರೆದುಕೊಟ್ಟ ಚಿ|| ಮೋಹನ, ಚಿ|| ಶಕುಂತಲ ಇವರಿಗೆ ಧನ್ಯವಾದಗಳು.

ಸುಂದರವಾಗಿ ಮುದ್ರಣಮಾಡಿಕೊಟ್ಟ ನಾಗರಾಜಪ್ರೆಸ್ ಮಾಲೀಕರಾದ ಶ್ರೀ. ಹೊನ್ನಪ್ಪನವರಿಗೂ ಮತ್ತು ಇತರ ವಿಧಗಳಲ್ಲಿ ನೆರವಾದ ಅನೇಕ ಗೆಳೆಯರಿಗೂ ನನ್ನ ವಂದನೆಗಳು. ತಮ್ಮ ಪತ್ರಗಳನ್ನು ಬಹಿರಂಗಕ್ಕೆ ತರಲು ಅನುಮತಿಯಿತ್ತ ಶೌರಿ, ಸಂಜೀವರಿಗೆ ನಾನು ತುಂಬಾ ಆಭಾರಿಯಾಗಿದ್ದೇನೆ.

ಚೈತ್ರ ಬಹುಳ ಬಿದಿಗೆ,<br>ವಿಕೃತಿನಾಮಸಂವತ್ಸರ,<br>ಮೈಸೂರು. } **ಜೈ ಕರ್ನಾಟಕ**

**ನಾಕೃಮೂ**

**ಡಿ. ವಿ. ಗುಂಡಪ್ಪ.**

೧೮, ನಾಗಸಂದ್ರ ರೋಡ್
ಬಸವನಗುಡಿ, ಬೆಂಗಳೂರು-೪
ಮಾರ್ಚ್ ೨೪, ೧೯೫೦

ಮಿತ್ರರೆ,

ನನ್ನ ಮನೆಯ ಹುಡುಗರು ಇಬ್ಬರು ಮೂವರು ನಾನು ಮನೆಯಲ್ಲಿಲ್ಲವೆಂದು ತಿಳಿದುಕೊಂಡು ಹರಟೆ ಹೊಡೆಯುತ್ತಿದ್ದಾಗ ನಾನು ಮನೆಯಲ್ಲಿದ್ದುಕೊಂಡು ಸದ್ದು ಮಾಡದೆ ಕೇಳಿದ್ದುಂಟು. ನನಗೆ ಅಂಥಾ ಸಂತೋಷಾನುಭವವಾಯಿತು, ನೀವೂ ಶೌರಿಯೂ ಒಬ್ಬರೊಬ್ಬರಿಗೆ ಬರೆದುಕೊಂಡ ಕಾಗದಗಳನ್ನು ನೋಡಿದಾಗ. ನೀವಿಬ್ಬರೂ ದೊಡ್ಡ ದೊಡ್ಡ ಧ್ಯೇಯಗಳುಳ್ಳ ಯುವಕರು. **ಹರಟೆಯ (Chatty) ಶೈಲಿ ಒಳ್ಳೆಯ ಸ್ನೇಹ ಪತ್ರದ ಲಕ್ಷಣ. ಅದು ಒಂದು ಘನವಿಚಾರದ ಅಂತರಂಗವನ್ನು ಒಂದು ಲಘು ಟೀಕೆಯಿಂದ ಹೊರಪಡಿಸುವ ಸೊಗಸು. ಕನ್ನಡದಲ್ಲಿ ಅಂಥಾ ಸಾಹಿತ್ಯ ಬೆಳೆಯ ಬೇಕಾಗಿದೆ.** ನೀವು ಅದಕ್ಕೆ ಮೊದಲುಮಾಡಿದ್ದೀರಿ. ಅಮೆರಿಕದ ನೋಟಗಳ ಮತ್ತು ಅಮೆರಿಕನರ ನಡೆನುಡಿಗಳ ವರ್ಣನೆ ಹೆಚ್ಚಾಗಿರಬಹುದಾಗಿತ್ತು. ಅದಕ್ಕಾಗಿ ನೀವು ಯುಕ್ತಾಂಶಗಳನ್ನು ಗುರುತುಮಾಡಿಟ್ಟುಕೊಂಡಿರಬಹುದೆಂದು ಶೌರಿಯ ಮಾತಿನಿಂದ ತೋರುತ್ತದೆ. ನಿಮ್ಮಿಬ್ಬರ ಪತ್ರಿಕಾ ಪ್ರಸಂಗ ಮುಂದೆ ಸಾಗಲಿ. ಅದು ಸಾಹಿತ್ಯಕಲೆಯ ಒಂದು ರೂಪ,- ಅಭ್ಯಾಸದಿಂದ ಉತ್ತಮಪಡತಕ್ಕದ್ದು. ಅದಕ್ಕೆ ತಕ್ಕ ಮನಸ್ಸಿನ ಲವಲವಿಕೆಯೂ ಮಾತಿನ ನಯವೂ ನಿಮಗಿವೆಯೆಂದು ನನಗನ್ನಿಸಿದೆ. ಎಲ್ಲ ಶುಭವಾಗಲಿ.

ನಿಮ್ಮವ,
**ಡಿ. ವಿ. ಜಿ.**

---

## ಚಿ|| ಶಕುಂತಲೆಗೆ

( ನಿನ್ನ ೧೭ ನೇ ಹುಟ್ಟಿದ ಹಬ್ಬಕ್ಕೆ ಉಡುಗೊರೆ )

—:o:—

# ನಮ್ಮ ಕಾಗದಗಳು

ನ್ಯೂಯಾರ್ಕ್,
೧-೫-೧೯೪೭

ಪ್ರಿಯ ಶೌರಿ,

ನಾನು ಹಾಂಕಾಂಗ್, ಷಾಂಘೈ, ಹೊನಲೂಲು ನಗರಗಳಿಂದ ಹಾಕಿದ ಕಾಗದಗಳು ಮುಟ್ಟಿರಬಹುದು. ನಿನ್ನಿಂದ ಕಾಗದವೇ ಬಾರದ ಪ್ರಯುಕ್ತ ಅವುಗಳಲ್ಲಿ ಒಂದಾದರೂ ತಲ್ಪಿದೆಯೋ ಇಲ್ಲವೋ ಎಂಬ ಶಂಕೆಯಾಗಿದೆ. ಆ ಕಾಗದಗಳು ತಲ್ಪದೆ ಇದ್ದರೂ, ಈ ಕಾಗದ ತಲ್ಪದೇ ಇರಲು ಕಾರಣವೇ ಇಲ್ಲ. ಆದ್ದರಿಂದ ನಿನ್ನ ಉತ್ತರ ನಿರೀಕ್ಷಿಸುತ್ತಿದೇನೆ. ಕಾಗದ ಬರೆಯಯ್ಯಾ ಶೌರಿ ಮಹಾಶಯ.

ಮೇ ತಿಂಗಳ ಪ್ರಾರಂಭವಲ್ಲಿ, ಇಲ್ಲಿ ತಂಪಾದ ಹವಾ ಇರುತ್ತದೆ. ಚಳಿಯೂ ಅಷ್ಟಿಲ್ಲ. ಶಖೆಯಂತೂ ಕಡಿಮೆ. ಗಿಡ ಮರಗಳು ಚಿಗಿಯುವ ಕಾಲ. ತುಂಬಾ ಚೆನ್ನಾಗಿರುತ್ತದಂತೆ ಈ ತಿಂಗಳು.

ಅಯ್ಯಾ! ಈ ಮಹಾನಗರವಾದ ನ್ಯೂಯಾರ್ಕಿನ ವೈಭವ ವನ್ನೇನು ಹೇಳಲಿ. ನ್ಯೂಯಾರ್ಕನ್ನು ಯಾವ ರೀತಿಯಿಂದಲೂ ವರ್ಣಿಸದೆ, ನ್ಯೂಯಾರ್ಕನ್ನು 'ನ್ಯೂಯಾರ್ಕೆಂದೇ' ಕರೆದರೆ ಒಳಿತು. ಅದೇನು ಗದ್ದಲ ಈ ನಗರದಲ್ಲಿ. ನೋಡು ನನ್ನ ಅಮೇರಿಕೆಯ ಗೆಳೆಯ ಹೇಳಿದ. ಇಲ್ಲಿ ೪೨ ನೇ ಬೀದಿ ಎಂದು ತುಂಬಾ ಪ್ರಸಿದ್ಧಿಯಾದ ಬೀದಿ ಇದೆ. ಇದನ್ನು ಹಾಯ್ದು ಐದನೆಯ ಅವೆನ್ಯೂ ಹೋಗುತ್ತದೆ. ಇವೆರಡೂ ಸಂಧಿಸುವ ಚೌಕದಲ್ಲಿ ಸಾಯಂಕಾಲ ೫ ಘಂಟೆಗೆ ಆಗುವಷ್ಟು ಗದ್ದಲ ಪ್ರಪಂಚದ ಇನ್ನಾವ ನಗರದಲ್ಲಿಯೂ ಆಗುವುದಿಲ್ಲವೆಂದು ಕಂಡು ಹಿಡಿದಿದ್ದಾರಂತೆ. ನನಗೂ ಹಾಗೇ ಅನ್ನಿಸಿತು ಶೌರಿ. ಪ್ರಪಂಚದಲ್ಲೆಲ್ಲಾ ಹೆಸರುವಾಸಿಯಾದ ಬಹುದೊಡ್ಡದಾದ ಇಂಗ್ಲೀಷ್ ಪತ್ರಿಕೆ 'ನ್ಯೂಯಾರ್ಕ್ ಟೈಮ್ಸ್' ಕಚೇರಿ ಇರುವುದು ಈ ೪೨ ನೇ ಬೀದಿಯಲ್ಲಿಯೇ. ಇಲ್ಲೊಂದು ಗಡಿಯಾರದ ಕಂಬವಿದೆ. ಇದಕ್ಕೆ Times Tower ಅನ್ನುತ್ತಾರೆ. ಈ ಪ್ರದೇಶದ ಸುತ್ತುಮುತ್ತಲೂ ರಾತ್ರಿ ಹಗಲೂ ವಿದ್ಯುಚ್ಛಕ್ತಿಯ ದೀಪ

ವನ್ನು ಹಚ್ಚಿರುತ್ತಾರೆ. ಹಗಲು ರಾತ್ರಿಯನ್ನು ಕಂಡು ಹಿಡಿಯುವುದೇ ಕಷ್ಟ. ಇಲ್ಲಿಯೇ ಹೆಸರಾದ '**ಬ್ರಾಡ್‌ವೇ**' ರಸ್ತೆ ಇರುವುದು. ಸಿನಿಮಾ ಮಂದಿರಗಳು, ನರ್ತನ ಕಲಾ ಶಾಲೆಗಳು, ರಾತ್ರಿಯ ವಿಹಾರ ಮಂದಿರ ಗಳು ಹೇರಳವಾಗಿರುವುದು ಈ ರಸ್ತೆಯಲ್ಲಿಯೇ. ಈ ಭಾಗಕ್ಕೆ ನಾ 'ಮಾಯಾ ಬಜಾರ್' ವೆಂದು ಹೆಸರಿಟ್ಟಿದ್ದೇನೆ. ಸರಿ ಏನಯ್ಯಾ?

ನಗರದಲ್ಲಿ ನಿಂತು ಗಗನವನ್ನು ವೀಕ್ಷಿಸಿದರೆ ಹಗಲೆಲ್ಲಾ ಆಕಾಶ ವಿಮಾನಗಳಿಂದ ತುಂಬಿಕೊಂಡಿರುವಂತೆ ಭಾಸವಾಗುತ್ತದೆ. ಕೆಳಗೋ, ಸುರಂಗಗಳನ್ನು ಕೊರೆದು ಪ್ರಯಾಣಿಕರಿಗೆ ಅನುಕೂಲವಾಗುವಂತೆ ರೈಲು ಗಳನ್ನು ಹಾಕಿದ್ದಾರೆ. ಇಲ್ಲಿ ಅವಕ್ಕೆ Subway ಎಂದು ಕರೆಯುತ್ತಾರೆ. ಕೇವಲ ೫ ಸೆಂಟು (೦-೩-೬) ಕೊಟ್ಟರೆ ನ್ಯೂಯಾರ್ಕ್ ನಗರದ ಯಾವ ಭಾಗಕ್ಕಾದರೂ ಹೋಗಬಹುದು. ರಸ್ತೆಯ ತುಂಬಾ ಬರೀ ಕಾರುಗಳೇ. ಅಯ್ಯಾ! ಈ ನಗರವನ್ನು '**ಕಾರುಗಳ ನಗರ**' ಎಂದೇಕೆ ಕರೆಯ ಬಾರದೆಂದು ನನಗನ್ನಿಸುತ್ತದೆ. ಅಮೇರಿಕೆಯ ಅಧ್ಯಕ್ಷ ಹರ್ಬರ್ಟ್ ಹೂವರ್ ಹೇಳಿದ ಮಾತು 'ಮನೆಗೊಂದು ರೇಡಿಯೋ, ತಲೆಗೊಂದು ಕಾರು' ನೆನಪಿಗೆ ಬರುತ್ತದೆ.

ಇಲ್ಲಿ ರಸ್ತೆಗಳಿಗೆಲ್ಲಾ ನಂಬರುಗಳನ್ನು ಕೊಟ್ಟಿದ್ದಾರೆ. ೩೪ ನೇ ರಸ್ತೆಯಲ್ಲಿ ಇನ್ನೊಂದು ಅಗಾಧವಾದ ಕಟ್ಟಡವಿದೆ. ಅದಕ್ಕೆ '**ಸಾಮ್ರಾಜ್ಯ ಭವನ**' (Empire State Building)ವೆಂದು ಕರೆಯುತ್ತಾರೆ. ಇದು ಪ್ರಪಂಚದಲ್ಲೆಲ್ಲಾ ಅತ್ಯುನ್ನತವಾದ ಕಟ್ಟಡ. ೧೨೫೦ ಅಡಿ ಉದ್ದವಿದೆ. ೧೦೨ ಅಂತಸ್ತುಳ್ಳ ಮಹಡಿಗಳಿವೆ. ಎಡಕ್ಕೂ ಬಲಕ್ಕೂ ಸಾವಿರಾರು ಕೊಠಡಿಗಳಿವೆ. ಬೆಂಗಳೂರಿನ ಜನಸಂಖ್ಯೆಯಷ್ಟು ಜನ ಈ ಒಂದು ಕಟ್ಟಡದಲ್ಲಿ ವಾಸವಾಗಿದ್ದಾರಯ್ಯಾ. ನೋಡುವುದಕ್ಕೆ ಭವ್ಯ ವಾಗಿದೆ.

ನ್ಯೂಯಾರ್ಕ್‌ನಲ್ಲಿ ಸುಮಾರು ೨೦೦ ಭಾರತೀಯ ವಿದ್ಯಾರ್ಥಿ ಗಳಿದ್ದಾರೆ. ಇಲ್ಲಿ ೧೨೫ ನೇ ಬೀದಿಯಲ್ಲಿ '**ಅಂತರ ರಾಷ್ಟ್ರೀಯ ಭವನ**ವೊಂದಿದೆ (International House) ಇಲ್ಲಿ ಸುಮಾರು ೧೦೦

ಭಾರತೀಯ ವಿದ್ಯಾರ್ಥಿಗಳಿದ್ದಾರೆ. ನಾವೆಲ್ಲ ಕಲೆತು ಮನೆಯನ್ನು ಜ್ಞಾಪಕ ಮಾಡಿಕೊಳ್ಳುವುದು ಇಲ್ಲಿಯೇ. ಇಲ್ಲಿ ಕನ್ನಡದವರು ನಾಲ್ಕಾರು ವಿದ್ಯಾರ್ಥಿಗಳಿದಾರೆ.

ನೋಡು, ನಿನ್ನಿಂದ ಕಾಗದ ಬಾರದೇ ನಾ ತುಂಬಾ ಕಂಗಾಲ ನಾಗಿದೇನೆ. ನನ್ನ ವಿಳಾಸ ಗೊತ್ತಿಲ್ಲವೇ? ಸಂಜೀವ ಬರೆದ ಕಾಗದ ಗಳು ಬಂದಿವೆ. ನಿನ್ನದೇಕೆ ಬರಲೊಲ್ಲವು?

ಭಾರತ, ಕರ್ನಾಟಕ, ಮೈಸೂರು, ಇಲ್ಲಿನ ಸುದ್ದಿಗಳನ್ನು ಸೂಕ್ಷ್ಮ ವಾಗಿ ತಿಳಿಸಯ್ಯಾ. ೧೨,೦೦೦ ಮೈಲಿ ದೂರದಲ್ಲಿದ್ದ ನಮಗೆ ಹಳಸಿದ ಸುದ್ದಿಯೂ ರುಚಿಯೇ. ಮನೆಯಲ್ಲಿ ಹಿರಿಯರು, ಎಲ್ಲಾ ಕ್ಷೇಮವಷ್ಟೆ. ಉಳಿದದ್ದು ಮುಂದಿನ ಕಾಗದದಲ್ಲಿ.

ಪ್ರೀತಿಯಿರಲಿ,

ಇತಿ ಹೇಗೆ,

ನಾಕ್ರಮೂ

---:o:---

## ಎರಡು

ನ್ಯೂ ಯಾರ್ಕ್,
೧೮-೪-೪೭

ಸಂಜೀವ,

ನೀನು ೧೧ ನೇ ತಾರೀಖು ಬರೆದ ಕಾರ್ಡು ನಿನ್ನೆ ಮುಟ್ಟಿ ನನ್ನ ಸಂತೋಷ ಇಮ್ಮಡಿಸಿತು. ಕೊನೆಗೂ ಮೌನ ಒಡೆದೆಯಲ್ಲಾ ಎಂಬ ಸಂತೋಷವೊಂದುಕಡೆ. ಬಾಳಗೆಳತಿಯನ್ನು ಪಡೆದು ಜೊತೆಯಾದೆ ಯಲ್ಲಾ ಎಂಬ ಹರ್ಷ ಇನ್ನೊಂದೆಡೆ. ಇದೀಗ ಸಂಜೆಯಾಗಿದೆ. ನ್ಯೂಯಾರ್ಕಿನ ದೀಪಗಳೆಲ್ಲ ಬೆಳಗುತ್ತಿವೆ. ಸಂಜೆಯ ಸೂರ್ಯ ಹಡ್ಸನ್ ನದಿಯ ತೀರದಲ್ಲಿ, ಅಂಚಿನಲ್ಲಿ ಇಣಕಿ ಹಾಕುತ್ತಿದಾನೆ. ಈ ವೇಳೆಗೆ ನಿನ್ನ ಮದುವೆ ಆಗಿರಬಹುದು. ಶುಭಮಸ್ತು. ನಿನ್ನ ಜೀವನ

ರಥ ಮುಗ್ಗರಿಸದೆ ಯಶಸ್ವಿಯಾಗಿ ಮುಂದೆ ಸಾಗಲಿ ಎಂದು ದೇವರನ್ನು ಪ್ರಾರ್ಥಿಸುತ್ತೇನೆ. ನಿಮ್ಮ ಜೀವನವೆಂಬ ದೋಣಿ ದಡವನ್ನು ಸುರಕ್ಷಿತವಾಗಿ ಮುಟ್ಟಲಿ. ನಿಮ್ಮ ಹೊಸ ಜೀವನಕ್ಕೆ ನಾಲ್ಕು ದಿಕ್ಕುಗಳಿಂದಲೂ ತೇಜಸ್ಸು ಬರಲಿ. ಸುಖಶಾಂತಿ ನಿಮ್ಮ ಮನೆಯ ನಂದಾದೀಪವಾಗಿರಲಿ. ಹೊಸದಾದ ನವಿರಾದ ಹೂವೊಂದು ನಿನ್ನ ಕೈಲಿ ಸಿಕ್ಕಿದೆ. ಅದನ್ನು ಜೋಕೆಯಿಂದ ಮಾಸದಂತೆ ಇಟ್ಟುಕೊಳ್ಳುವುದು ನಿನ್ನ ಕೆಲಸ. ಆ ಹೂವಿನ ಹೆಸರೇನು? ಮಲ್ಲಿಗೆಯೇ? ಜಾಜಿಯೇ? ಸೇವಂತಿಗೆಯೇ? ಅಥವಾ ಸಂಪಿಗೆಯೇ?

ಸಂಜೀವ! ನಿನ್ನ ಕಣ್ಣಾಸ್ಪತ್ರೆಯಲ್ಲಿ ನಾವು ನಮ್ಮ ಮುಂದಿನ ಜೀವನದ ಬಗ್ಗೆ ಏನೇನೋ ಮಾತನಾಡಿಕೊಳ್ಳುತ್ತಿರಲಿಲ್ಲವೇ? ಅದೆಲ್ಲಾ ಇಂದು ಜ್ಞಾಪಕಕ್ಕೆ ಬರುತ್ತಿದೆ. ಕಣ್ಣುಖುಷಿಯಾದ ನಿನಗೆ ಶಾಂತಿ ದೊರಕಿತು. ಆದರೆ ನಿನ್ನ ಶಕುಂತಳೆ ದೂರದ ದೇಶವೊಂದರಲ್ಲಿ, ಸಾಗರದಾಚೆ, ಸಹಸ್ರ ಮೈಲಿಗಳಾಚೆ, ನೀರಿನಲ್ಲಿ ನಡೆದು ಬರುವ ಸ್ನೇಹಿತರ ನವಿನುಡಿಗಳಿಗೋ, ಗಾಳಿಯಲ್ಲಿ ಹಾರಾಡಿಕೊಂಡು ತೂರಿಬರುವ ಗೆಳೆಯರ ಸಂದೇಶಕ್ಕೋ ಕಾಯುತ್ತಾ, ಚಂದ್ರನನ್ನು ವಶಪಡಿಸಿಕೊಳ್ಳಲು ಹೋಗಿ, ಚಂದ್ರಾಪೀಡನಾಗಿ, ಸಿಕ್ಕದ ಜಿಂಕೆಯನ್ನರಸುತ್ತ, ಆತ್ಮಶಾಂತಿಯಿಲ್ಲದೆ, ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಅಲೆಯುತ್ತಾ ಮಹಾಶ್ವೇತೆಯಾಗಿದ್ದಾಳೆ. ಶಾಕುಂತಲ ದೂರದ ದುಷ್ಯಂತನನ್ನು ಪಡೆವುದು ಯಾವಾಗ? ಓ! ಇದು ಬರಿಯ ಕನಸು!

ಸ್ವರ್ಣ ಭೂಮಿಯನ್ನು ಮುಟ್ಟುತ್ತಲೇ, ನಿನ್ನ ಕಾಗದ ಕಾದು ನಿಂತಿತ್ತು ನನಗಾಗಿ ಸ್ಯಾನ್ ಫ್ರಾನ್ ಸಿಸ್ಕೋವಿನಲ್ಲಿ. ಆಗ ಅದೆಷ್ಟು ಸಂತೋಷವಾಯಿತೋ, ಈಗಲೂ ಅದರ ಇಮ್ಮಡಿ ಆನಂದವಾಗಿದೆ. ಇಲ್ಲಿಂದಲೇ ನಿನ್ನ ಮದುವೆಯ ಚಿತ್ರಗಳನ್ನು ನನ್ನ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುತ್ತಿದೇನೆ. 'ಅದೋ ನೀನು ಮಂದಸ್ಮಿತನಾಗಿ ನಗುತ್ತಿರುವೆ. ನಿನ್ನ ಕೊರಳಲ್ಲಿ **'ಮೈಸೂರು ಮಲ್ಲಿಗೆ'**ಯ ಹಾರ ಕಾಣುತ್ತಿರುವುದಲ್ಲಾ! ಶೌರಿ ಪಕ್ಕದಲ್ಲಿಯೇ ನಿಂತುಕೊಂಡಿದಾನೆ. ನಿನ್ನ ಗೆಳೆಯರು, ಶಂಕರ, ರಂಗರಾವ್, ಅಡಿಗ ಅಲ್ಲಿಯೇ ಇದಾರೆ. ಭೀಮು ಹೂವು ಗಂಧ ಕೊಡು

ತ್ತಿದಾನೆ. ನಿಮ್ಮ ಭಾವ ಅದೋ ಎಲೆ ಅಡಿಕೆ ಕೊಡುತ್ತಿದಾರೆ ನೋಡು. ನಿಮ್ಮ ಹಿರಿಯರು ಬಂದ ಅತಿಥಿಗಳ ಕೈಕುಲುಕುತ್ತಾ ಆನಂದ ಭರಿತರಾಗಿದ್ದಾರೆ. ನಿನ್ನ ಪುಟ್ಟತಂಗಿ ಅದೋ ನಿನ್ನನ್ನು ಕರೆಯುತ್ತಿದಾಳೆ. ಜಯರಾಮು ಹೊರಗಡೆ ಆಡುತ್ತಿದಾನಲ್ಲವೇ! ಕೃಷ್ಣ, ಈಗಲೂ ಕೈಯಲ್ಲಿ ಪುಸ್ತಕ ಹಿಡಿದಿರುವನಲ್ಲಾ! ಓಹೋ! ಆರತಿ ಎತ್ತುತ್ತಿರುವವರಾರು?'

ನೋಡು! ಅದೃಶ್ಯವಾಯಿತು ನಿನ್ನ ಮದುವೆಯ ಚಿತ್ರ. ನಾನು ಚಿತ್ರಿಸಿಕೊಂಡಂತೆಯೇ ಮದುವೆ ಆಗಿರಬಹುದಲ್ಲವೇ? ನಿನ್ನ ಮದುವೆಯ ಚಿತ್ರ ಚಿತ್ರಿಸಿಕೊಂಡು ನಾ ಹೊರಗೆ ಬಂದಾಗ ಕಂಡ ದೃಶ್ಯ ಏನು ಗೊತ್ತೆ? ಈ ದೇಶದಲ್ಲಿ ಮೇ ತಿಂಗಳು ವಸಂತಮಾಸವಿದ್ದಂತೆ. ನ್ಯೂಯಾರ್ಕಿನ ಮನಮೋಹಿಸಿಯರು, ಈ ತಿಂಗಳಲ್ಲಿ ಮೋಹಿಸಿ ಮನ್ಮಥರಂತೆ ವಸಂತ ರೋಗಪಿಡಿತರಾಗುತ್ತಾರೆ. ಈ ಊರಿನ ಯಾವ ಉದ್ಯಾನವನಗಳಲ್ಲಿ ನೋಡಿದರೂ ಅದೇ ದೃಶ್ಯ ಕಾಣುವುದು,

ಇನ್ನೇನಪ್ಪಾ, ಹೊಸ ಸಂಸಾರ ಪ್ರಾರಂಭಿಸಿದೆ. ಹೊಸ ಗೆಳೆತನ. ಈ ಮಧ್ಯದಲ್ಲಿ ಹಳಬರು ಜ್ಞಾಪಕಕ್ಕೆ ಬರಲಾರರು. ನಿನ್ನಿಂದ ಈ ಕಾಗದಕ್ಕೆ ಉತ್ತರ ಬರುತ್ತದೋ ಇಲ್ಲವೋ ಅದೇ ಅನುಮಾನ ನನಗೆ. ಆದರೂ ನಾ ಆಶಾವಾದಿ. ಬೊಂಬಾಯಿನ ಆಶ್ರಮವನ್ನು ಬದಲಿಸುವೆಯೋ? ಎಲ್ಲಾದರೂ ಬೇರೆ ತಾಣ ಸಿಕ್ಕಿದೆಯೋ? ನಾ ಮರಳಿ ಭಾರತಕ್ಕೆ ಬಂದಾಗ, ಬೊಂಬಾಯಿನಲ್ಲಿ ನಿಮ್ಮ ಮನೆಯಲ್ಲೇ ಉಳಿಯುವುದು. ಆಗ ಪುನಃ ನಾನು ಆಲೂಗೆಡ್ಡೆ, ಸೀರುಳ್ಳಿ, ಟೋಮಾಟೋ ಹುಳಿ ಮಾಡುವ ಸರದಿ ಬರುವುದಿಲ್ಲವೆಂದುಕೊಂಡಿದ್ದೇನೆ.

ಶ್ರೀಮತಿ ಪರ್ಲ್ ಬಕ್ ರವರನ್ನು ಕಂಡಿದ್ದೆ. ಚರಕಾ ಪ್ರದರ್ಶನ ಮಾಡಿದೆ ಆಕೆಯ ಮುಂದೆ. ಆಕೆಗೆ ಭಾರತೀಯರಲ್ಲಿ, ಗಾಂಧೀಜಿಯವರಲ್ಲಿ ತುಂಬಾ ಗೌರವ ಇದ್ದಂತೆ ಕಾಣುತ್ತದೆ.

ನನ್ನ ಕೆಲಸ ಬಹು ನಿಧಾನವಾಗಿ ನಡೆದಿದೆ. ಸೆಪ್ಟಂಬರ್ ವರೆಗೂ ವಿಶ್ವವಿದ್ಯಾನಿಲಯಕ್ಕೆ ಹೋಗುವ ಗೋಜಿಲ್ಲ. 'One Leader'

ಪತ್ರಿಕಾಲಯದಲ್ಲೇ ಕೆಲಸ ನಡೆಯುತ್ತಿದೆ. ಅದಕ್ಕಿಂತ ಹೆಚ್ಚಾಗಿ ಮನಸ್ಸು ಸ್ಥಿರ ಮಾಡಿಕೊಂಡು ದೇಹಾರೋಗ್ಯ ಕಾಪಾಡಿಕೊಳ್ಳುವುದರಲ್ಲಿಯೇ ಹೆಚ್ಚುವೇಳೆ, ಮತ್ತು ಶಕ್ತಿಯನ್ನು ಕಳೆಯುತ್ತಿದ್ದೇನೆ.

ವಿವೇಕಾನಂದರು ಜಯಭೇರಿ ಹೊಡೆದ **ಹಾರ್ವರ್ಡ್ ವಿಶ್ವವಿದ್ಯಾನಿಲಯ**ವನ್ನು ನೋಡಲು ಬೋಸ್ಟನ್‌ಗೆ ಹೋಗಿದ್ದೆ. ವಿಶ್ವವಿದ್ಯಾನಿಲಯದ ಆವರಣದಲ್ಲಿ, ವಿವಿಧ ಭಾಷೆ, ವಿಷಯಗಳನ್ನು ಹೇಳಿಕೊಡುವ ಮಂದಿರಗಳಲ್ಲದೆ, ದೊಡ್ಡದಾದ ಪುಸ್ತಕ ಭಂಡಾರ, ವಸ್ತು ಪ್ರದರ್ಶನಾಲಯ, ಷೆಲ್ಲಿ, ಕೀಟ್ಸರ್ ಕೈಬರಹದ ಕರಡುಪ್ರತಿಗಳು, ರಾಮಾಯಣ, ಮಹಾಭಾರತದ ಚಿತ್ರಪುಸ್ತಕಗಳೂ, ಇದ್ದು, ವಿದ್ಯಾಮಂದಿರದ ಕೀರ್ತಿಯನ್ನು ಬೆಳಗಿವೆ. ಹಾರ್ವರ್ಡ್‌ನಲ್ಲಿ ಸರಸ್ವತಿ ನೆಲೆಸಿದ್ದಾಳೆ.

ನಮ್ಮ ಹಿರಿಯ ಸಾಹಿತಿ ಶ್ರೀ|| ಡಿ. ವಿ. ಗುಂಡಪ್ಪನವರಿಲ್ಲವೇ? ಅವರ ಮಗ ಡಾ|| ಬಿ. ಜಿ. ಎಲ್. ಸ್ವಾಮಿ ಇಲ್ಲಿದ್ದಾರೆ. ಇಲ್ಲಿ ಅವರು ಸಸ್ಯಶಾಸ್ತ್ರ ಇಲಾಖೆಯಲ್ಲಿ (Biology) 'ಫೆಲೋ' ಆಗಿದ್ದಾರೆ. ನನ್ನ ಜೊತೆಯಲ್ಲೇ ಹಡಗು ಏರಿದ್ದು ನಿನಗೆ ಗೊತ್ತಿದೆಯಲ್ಲ. ಶೌರಿಯ ಸ್ನೇಹಿತರು.

ಮೈಸೂರಿನಿಂದ ಕನ್ನಡ ಪತ್ರಿಕೆಗಳನ್ನೂ ಬೊಂಬಾಯಿನಿಂದ ಇಂಗ್ಲೀಷ್ ಪತ್ರಿಕೆಗಳನ್ನೂ ಕಳುಹಿಸು.

ಈಗ ಹೊಸ ರೇಡಿಯೋ ಒಂದನ್ನು ಕೊಂಡಿದ್ದೇನೆ. ಅದೇ ನನ್ನ ಜೊತೆಗಾರ.

ಪ್ರೀತಿಯಿರಲಿ.

ನಿನ್ನವ,

ಕೃಷ್ಣ.

—:o:—

## ಮೂರು

ಬೊಂಬಾಯಿ,
೧೫-೬-೧೯೪೭

ಅಣ್ಣ ನಾಗ,

ಅಂತೂ ಕೊನೆಗೂ ಬರೆದೇಬಿಟ್ಟೆ. ಇದಕ್ಕೆ ಮುಂಚೆ ನಿನಗೆ ಬರೆಯದಿರಲು ಒಂದೇ ಕಾರಣ—ನಿನ್ನ ಸರಿಯಾದ ವಿಳಾಸ ತಿಳಿಯದಿದ್ದುದು. ನೀನು ಹಾಂಕಾಂಗಿನಿಂದ ಬರೆದಿದ್ದ ಕಾಗದವನ್ನೂ ಅದೇ ರೀತಿಯಿಂದ ಸಂಜೀವನಿಗೆ ಬರೆದಿದ್ದ ಕಾಗದಗಳನ್ನೂ ಓದಿದೆ. ಸಂಜೀವ ಮದುವೆ ಮಾಡಿಕೊಂಡು ಬೊಂಬಾಯಿಗೆ ಬಂದಮೇಲೆ ನಿನ್ನೆಯೇ ಅವನನ್ನು ನೋಡಿದ್ದು. ಹೇಗೋ ಏನೋ ಇದಕ್ಕೆ ಮುಂಚೆ ಈ ಹದಿನೆಂಟು ದಿನವೂ ಅವನ-ನನ್ನ ಭೇಟಿ ಆಗಲೇ ಇಲ್ಲ. (ಮದುವೆಗೆ ಮೈಸೂರಿಗೆ ಹೋಗಲಿಲ್ಲವೆಂದು ಪ್ರತ್ಯೇಕವಾಗಿ ಬರೆಯಬೇಕಿಲ್ಲವಷ್ಟೆ?) ನೀನು ಅವನಿಗೆ ಬರೆದಿದ್ದ ಉದ್ದನೆಯ ಕಾಗದವನ್ನು ಓದಗೊಟ್ಟ. ಅದರಲ್ಲಿ ವಿಳಾಸ ತಿಳಿಸಿದ್ದರಿಂದ ಒಡನೆಯೇ ಬರೆಯಬೇಕು ಇನ್ನು ತಡ ಸಲ್ಲದು ಎಂದು ತೀರ್ಮಾನಿಸಿಕೊಂಡೆ.

ಸಂಜೀವನ ಕುಟೀರದಲ್ಲಿ ನಿನ್ನೆ ಒಂದು ಒಂದೂವರೆ ತಾಸು ಕಳೆದೆ. ಹೊಸಕಳೆ ಬಂದಂತಿದೆ. ಅಂದಿನ ಏಕಾಕಿಗಳ ಮೂಗರ ಗುಹೆಗೂ ಇಂದಿನ ಗೃಹಕ್ಕೂ ಎಷ್ಟು ತಾರತಮ್ಯವೆನ್ನುತ್ತೀ? ಏನು ಒಪ್ಪ, ಎಷ್ಟು ಓರಣ! ಆದರೆ ನಾವು ಹಿಂದಿನ ಸ್ವಾತಂತ್ರ್ಯವಹಿಸುವಂತಿಲ್ಲ, ಅಲ್ಲವೆ? ನಿನ್ನ ಕಾಗದದಲ್ಲಿ ನೀನು ಆಲೂಗಡ್ಡೆ ನೀರುಳ್ಳಿಯ ಅಡಿಗೆಯ ಪ್ರಸ್ತಾಪವೆತ್ತಿ "ನಾ ಮತ್ತೆ ಬರುವಾಗ ನಾವು ನಾವೇ ಅಡಿಗೆಗೆ ಕೈ ಹಚ್ಚುವ ಗೊಡವೆಯಿಲ್ಲ" ಎಂದಿರುವೆ. ಒಂದು ದೃಷ್ಟಿಯಿಂದ ಇದು ಸಂತೋಷಕ್ಕೆ ಕಾರಣ; ಮತ್ತೊಂದು ದೃಷ್ಟಿಯಿಂದ ಮರುಕಕ್ಕೆ ಕಾರಣ. ಕಳೆದ ದಿನಗಳಿಗಾಗಿ. ನೀನೊಮ್ಮೆ ನನ್ನನ್ನೂ ಕುಳ್ಳ ಶ್ರೀಧರನನ್ನೂ ಕರೆದು ಈರುಳ್ಳಿ ಹುಳಿಯ ಊಟವಿಕ್ಕಿರಲಿಲ್ಲವೆ? ನೀ ಮತ್ತೆ ಬಂದನಂತರ ಆ ಬಗೆಯ ಪ್ರಿಯನಿಮಿಷ ಬಾರದು. ಖಂಡಿತ. ನಿನ್ನ ಬಾಳಬಟ್ಟೆ

ಬದಲಾಯಿಸಿರುತ್ತೆ. ನಾನೂ ಮೂರುವರ್ಷದ ಹಿಂದಿನ ಶೌರಿಯಾಗಿಯೇ ಉಳಿದಿರುತ್ತೇನೆಯೇ ?

ಇಲ್ಲಿನಂತೆಯೇ ಅಲ್ಲಿಯೂ ನೀ ರೈಲುಗಳಿಗೆ ಹಣ ಸುರಿಯುತ್ತಿದ್ದೀ! ನಿನ್ನ ಹೆಸರನ್ನು ಚಕ್ರಪಾದಮೂರ್ತಿ ಎಂದಾದರೂ ಬದಲಾಯಿಸಿಕೋ, ಅನ್ವರ್ಥವಾಗುತ್ತದೆ. ಅಮೇರಿಕೆ ನಿನಗೆ ಇನ್ನೂ ಒಗ್ಗಿಲ್ಲವೇನು ? ನಿನ್ನ ಮನಸ್ಸು ಇನ್ನೂ ಅಲ್ಲಿ ನೆಲೆಸಿದಂತಿಲ್ಲ. ಅಲ್ಲಿನ ವೇಗ ವಿದೇಶಿಗಳಿಗೆ ಕ್ಲಿಷ್ಟವಾದ ಸಮಸ್ಯೆಯೆಂದು ಕೇಳಿಬಲ್ಲೆ. ಆ ವಿಷಯದಲ್ಲಿ ನಿನಗೇನೂ ತೊಂದರೆಯಾಗಲಾರದೆಂದು ನನ್ನ ಊಹೆ. ಈಗ "One Leader" ಎಂಬ ಪತ್ರಿಕೆಯಲ್ಲಿಯೇ ಇದ್ದೀಯೋ ಅಥವಾ ಬೇರೆ ಯಾವುದಾದರೂ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿದೆಯೊ ?

ಶ್ರೀಮತಿ ಪರ್ಲ್ ಬಕ್‌ರನ್ನು ನೋಡಿದ್ದುದು ತಿಳಿದು ಸಂತೋಷ ವಾಯಿತು. ಈ ಭೇಟಿಯ ವಿವರವಾದ ಕತೆಯನ್ನು ಬರೆದಿಟ್ಟುಕೊಂಡಿ ದ್ದೀಯಾ? ನಿನ್ನ ಪ್ರವಾಸದ ಹಾಗೂ ಅನುಭವ ಪರಂಪರೆಗಳು ದಿನ ಚರಿಯನ್ನು ಗುರುತುಮಾಡಿಟ್ಟುಕೊಳ್ಳುತ್ತ ಬಂದಿರುವೆಯೆಂದು ನಂಬು ತ್ತೇನೆ. ಶ್ರೀಮತಿ ಎಂ. ಆರ್. ಶಾರದಮ್ಮನವರು ಅಮೇರಿಕದ ಮಹಿಳೆ ಯರನ್ನು ಕುರಿತು "ದೇಶಬಂಧು" ವಾರ ಪತ್ರಿಕೆಯಲ್ಲಿ ಐದಾರು ಲೇಖನಗಳನ್ನು ಬರೆದಿದ್ದಾರೆ. ಚೆನ್ನಾಗಿದೆ.

ಆರೋಗ್ಯವನ್ನು ಹೇಗೆ ಕಾಪಾಡಿಕೊಂಡಿದ್ದಿ? ಯಾವ ಆಹಾರ ವನ್ನು ಪಳಕೆಮಾಡಿಕೊಂಡಿದ್ದೀ? ಬಿ. ಜಿ. ಎಲ್. ಸ್ವಾಮಿ ಹಾಸ್ಯಮಯ ವಾಗಿ, ಅಮೇರಿಕಾಕ್ಕೆ ಬಂದನಂತರ ಆಹಾರದ ವಿಷಯದಲ್ಲಿ ಋಷಿಯಾಗಿ ದ್ದೇನೆಂದು ಬರೆದಿದ್ದರು. ನೀನೂ ಹಾಗೆಯೇ ಋಷಿಯೇನಾದರೂ ಆಗಿದ್ದೀಯೋ? ನಿಮ್ಮ ಊರಕಡೆ ಬೇಸಿಗೆ ಹೇಗಿರುತ್ತದೆ? ಇಲ್ಲಿನ ಬೇಸಗೆ ಅನುಭವಿಸಿರುವವರಿಗೆ ಆ ಬಿಸಿಲು ಹೇಗೆ ತೋರುತ್ತದೆ?

ವಿಶಾಲ ವ್ಯಾಸಂಗ ಹೇಗೆ ನಡೆಯುತ್ತಿದೆ? ಬೌದ್ಧಿಕ ಪರಿಶ್ರಮಕ್ಕೆ ಅಲ್ಲಿ ತಕ್ಕಷ್ಟು ಆಸ್ಪದವೂ ಉತ್ತೇಜನವೂ ಇವೆಯೆ? ಮುಂದಿನ

ಆಲೋಚನೆ ಏನು ಮಾಡಿದ್ದಿ? ಆರ್ಥಿಕ ತೊಂದರೆಗಳೇನೂ ಇಲ್ಲವಷ್ಟೆ? ರೇಡಿಯೋ, ಟೈಪ್‌ರೈಟರ್ ಕೊಂಡುದು ಕೇಳಿ ಸಂತೋಷವಾಯಿತು.

ಭಾರತ ರಾಜಕೀಯ ತಿಳಿಯುತ್ತಲೇ ಇದ್ದಿ. ಮೈಸೂರು ರಾಜಕೀಯದಲ್ಲಿ ಯಾವ ಏರ್ಪಾಡುಗಳೂ ಇಲ್ಲ. ಸತ್ಯಾಗ್ರಹ ಆರಂಭವೇ ಆಗಲ್ಲಿಲ್ಲ. ದಿವಾಣರು ತಮ್ಮ ಮಾತನ್ನು ಉಳಿಸಿಕೊಳ್ಳಲೂ ಇಲ್ಲ. ಏನಾದರೂ ಸಾಧಿಸೋಣವೆಂಬ ಸಾಹಸ ಯಾರಲ್ಲೂ ಇದ್ದಂತೆಯೇ ತೋರಲಿಲ್ಲ.

ಇನ್ನೇನು ಸಂಜೀವ ಇಲ್ಲಿಗೆ ಬರಬಹುದು. ಇಂದು ಭಾನುವಾರ ಸಂಜೆ, ತನ್ನ ಪತ್ನಿಗೂ ಅತ್ತೆಯವರಿಗೂ ಗೇಟ್‌ವೇ ಆಫ್ ಇಂಡಿಯಾ ಮುಂತಾದ ನೋಟಗಳನ್ನು ತೋರಿಸಲು ಕರೆತರುವೆನೆಂದು ಹೇಳಿದ್ದಾನೆ.

ನಿನ್ನ ಉತ್ತರವನ್ನು ನಿರೀಕ್ಷಿಸುವ

ಶೌರಿ.

—:o:—

## ನಾಲ್ಕು

ನ್ಯೂಯಾರ್ಕ್,

೨೪-೬-೪೭

ಚಿ|| ಶೌರಿ,

ನಿನ್ನ ಕಾಗದ ಇಂದೇ ಬರಬೇಕೆ? ನಾ ಏನು ಉತ್ತರ ಬರೆಯಲಿ? ಅಧೀರನಾಗಿ, ಊರ ಹಂಬಲದ ವ್ಯಾಧಿಯಿಂದ ನರಳುತ್ತಾ, ನಾಳೆಯ ದಿನ ಭಾರತಾಭಿಮುಖವಾಗಿ ಹೊರಟ ನನಗೆ ಇಂದೇ ನಿನ್ನಿಂದ ಕಾಗದವೇ? ತಲೆಯಲ್ಲಾ ಚಿಂತೆಯ ಹುಳುಗಳು ಮುತ್ತಿ ನನ್ನ ತಲೆಯನ್ನು ಕೊರೆದು ಬಿಟ್ಟಿವೆ.

ನಿನ್ನ ಯೋಗ್ಯನಾದ ಅಣ್ಣ ನಾನಾಗಲಿಲ್ಲ. ಈಗ ನಿನ್ನ ಕಾಗದಕ್ಕೆ ಉತ್ತರ ಬರೆಯುವ ಶಕ್ತಿಯೂ ಇಲ್ಲ, ವ್ಯವಧಾನವೂ ಇಲ್ಲ. ಅದರಿಂದ ಪ್ರಯೋಜನವೂ ಇಲ್ಲ. ನಾ ನಾಳೆ ಹೊರಟೆ.

ನಾ ಸೋತೆ. ಆದರೂ ಸೋತು ಗೆಲ್ಲುವೆ. ನಾ ನಿನ್ನಿಂದ ಬೇಡು ವುದು ಒಂದೇ. ನನ್ನ ಸಂತೋಷದಲ್ಲಿ ಭಾಗಿಯಾದ, ನೀನು ನನ್ನ ನಿಜವಾದ ಒಡನಾಡಿಯಾದರೆ, ನನ್ನ ದುಃಖದಲ್ಲಿ, ಇಳಿತದಲ್ಲಿ ಭಾಗಿಯಾಗಿ ನನ್ನನ್ನು ಸಂತೈಸು.

ಇದೇ ನನ್ನ ಕೊನೆಯ ಬೇಡಿಕೆ.

ಇತಿ ನಿನ್ನವ ಎಂದಿನಂತೆ
ನಾಕ್ಸಮೂ

## ಐದು

ನ್ಯೂ ಯಾರ್ಕ್
೨೬-೬-೪೭

ಚಿ|| ಶಾರದಾ ಪ್ರಸಾದ್,

ಮೊನ್ನೆ ಚಕ್ರಪಾದ ಮೂರ್ತಿಯಾಗಿ ನಿನಗೊಂದು ಕಾಗದ ಬರೆದೆ. ಇಂದು ಪುನಃ ಅಣ್ಣಾ ನಾಡಿಗನಾಗಿ ಬರೆಯುತ್ತಿದೇನೆ. ನಿನ್ನ ಮತ್ತು ಸಂಜೀವನ ಕಾಗದಗಳು ಬಂದು ನನಗೆ ಸ್ಫೂರ್ತಿಯನ್ನು ಕೊಟ್ಟವು. ನಿನ್ನೆ ಭಾರತಕ್ಕೆ ಮರಳಿ ಬರಬೇಕೆಂದು ನಿರ್ಧರಿಸಿ ಹಡಗನ್ನು ಕೂಡ ಹತ್ತಿ ಬಿಟ್ಟಿದ್ದೆ. ದೇವರ ದಯದಿಂದ ಬುದ್ಧಿ ಹಿಂತಿರುಗಿಸಿತು. ಇಲ್ಲಿಯೇ ಇರಲು ನಿರ್ಧರಿಸಿ ಪುನಃ ಹಡಗಿನಿಂದ ಇಳಿದುಬಂದೆ. ಇದೆಲ್ಲವನ್ನು ಕೇಳಿ ನೀ ನಗುತ್ತೀಯೇನು? ತೌರೂರ ಹಂಬಲು ಹೆಚ್ಚಾಗಿ ಮರಳಿ ಭಾರತಕ್ಕೆ ಹೊರಟಿದ್ದೆ. ನಮ್ಮ ಹಿರಿಯ ಸಾಹಿತಿಗಳಾದ ಶ್ರೀ ದಿವಾಕರರುಬರೆದ ಕಾಗದವೊಂದು ಇಂದು ಬಂತು. ಆ ಕಾಗದ ನನ್ನ ನಿರ್ಧರವನ್ನು ಬದಲಾಯಿಸಿತು. ಹಡಗು ಹತ್ತಿ, ಇಳಿದು, ಬಂದ ರಾದ್ಧಾಂತ ಇಲ್ಲಿ ಬರೆಯಲು ಮನಸ್ಸಿಲ್ಲ. ಆದರೆ ಶ್ರೀ ದಿವಾಕರರ ಕಾಗದದ ಕೆಲವು ಶ್ರೇಷ್ಠ ವಾಕ್ಯಗಳನ್ನು ಮಾತ್ರ ಇಲ್ಲಿ ಉದಹರಿಸುವೆ.

**“ಧ್ಯೇಯವನ್ನು ಸ್ಪಷ್ಟವಾಗಿ ಕಣ್ಣೆದುರು ಇಟ್ಟುಕೊಂಡು ತತ್ವನಿಷ್ಠೆಯಿಂದ ಕೆಲಸಮಾಡುತ್ತಾ, ನೀತಿಯಿಂದ ಚ್ಯುತರಾಗದೆ ಸಾಗಿ ಉಜ್ವಲ ಭವಿಷ್ಯವನ್ನು ಸಾಧಿಸಬಲ್ಲ ವೀರ ತರುಣರಾಗುವಿರಿ.”**

ಈ ವಾಕ್ಯ ನನ್ನ ಜೀವನದ ಹಾದಿಯನ್ನೇ ಬದಲಾಯಿಸಿ ಬಿಟ್ಟಿತು ಕಣಯ್ಯ.

ನಿನ್ನ ಕಾಗದದಲ್ಲಿ ನಮ್ಮ ಹಿಂದಿನ ಕೆಲವು ಸವಿ ನೆನಪುಗಳನ್ನು ಜ್ಞಾಪಿಸಿದ್ದೀಯಾ. ನಿಜ ಕಳೆದ ದಿನಗಳವು. ವರದ, ಆನಂದ, ಬಾಲಯ್ಯ, ಟಿ. ವಿ., ಸೂರಿ, ನಾವೆಲ್ಲ ಅಂದು ಚಾಮುಂಡಿ ಬೆಟ್ಟದ ಅರ ಮನೆಯ ಒಳಂಗಳದಲ್ಲಿ ಬೆಳದಿಂಗಳೂಟ ಮಾಡಿದ್ದು ಎಂದಾದರೂ ಮರೆ ಯಲಿಕ್ಕೆ ಸಾಧ್ಯವೇ! ೧೨,೦೦೦ ಮೈಲಿ ದೂರದಲ್ಲಂತೂ ಅವು ರಸನಿಮಿಷ ಗಳಾಗಿ ಪರಿಣಮಿಸುವುವು.

ಮೈಲುಗಳಿಗೆ ಹಣ ಸುರಿಯುತ್ತಿರಬಹುದೆಂದು ನಿನ್ನ ಆಕ್ಷೇಪ. ಇಲ್ಲ; ಅನ್ಯಾಯವಾಗಿ ಸುರಿಯುತ್ತಿಲ್ಲ. ಅವಶ್ಯವಿದ್ದ ಕಡೆ ದೇಶನೋಡಿ ಜ್ಞಾನ ಸಂಪಾದಿಸಲು ಅಲೆಯುತ್ತಿದ್ದೇನೆ. 'Travelling itself is Education' ಎಂದು ನೀ ಕೇಳಿಲ್ಲವೆ? ಕೆಲಸವಿಲ್ಲದಾಗ ಸುಮ್ಮನೆ ಕುಳಿತಿರಲು ನನ್ನಿಂದ ಸಾಧ್ಯವಿಲ್ಲ. ಈ ವೇಗಮಯವಾದ ವೈಜ್ಞಾನಿಕ ಮಾಯಾಜಾಲದ ಅಮೇರಿಕೆಯ ಜೀವನ ನನಗಿನ್ನೂ ಒಗ್ಗಿಲ್ಲ. ನನ ಗೇಕೊ ರುಚಿಸದಾಗಿದೆ.

'ನಿನ್ನ ಅಮೇರಿಕೆಯ ಬಿಸಿಲು ಹೇಗಿದೆ' ಎಂದಿದ್ದೀ. ಇಲ್ಲಿ ಬಿಸಿಲು ಕಾಲವೂ ಇದೆ. ಈ ಮೇ ಮತ್ತು ಜೂನ್ ತಿಂಗಳು ಬರೀ ಎಳೆಯ ಬಿಸಿಲು. ಅಲೆಯಲು ಬಲು ಚೆನ್ನ. ಬೆಳಗ್ಗೆ ಸಂಜೆ ಸ್ವಲ್ಪ ಚಳಿಯಿರುತ್ತದೆ. ಓವರ್ ಕೋಟಿಲ್ಲದೆ ಹೊರಕ್ಕೆ ಹೋಗುವ ಹಾಗೆಯೇ ಇಲ್ಲ.

ಆಹಾರದ ವಿಷಯವಾಗಿ ಖುಷಿಯಾಗಿರುವುದೇನೋ ನಿಜ. ಹಾಲು, ಹಣ್ಣು, ಹಸಿಯ ತರಕಾರಿ, ಬ್ರೆಡ್ಡು ಇವೇ ನಮ್ಮ ಆಹಾರ. ಆದರೆ ನಾನಿರುವ ಕಡೆ ಅಡುಗೆ ಮಾಡಿಕೊಳ್ಳಲು ಅವಕಾಶವಿದೆ. ರಾತ್ರಿ ಮಾತ್ರ ಅನ್ನ ಹುಳಿ ಅಡಿಗೆ ಮಾಡಿಕೊಳ್ಳುತ್ತೇವೆ. ನಿಜ. ಇಲ್ಲಿ ಅಕ್ಕಿ

ಸಿಕ್ಕುತ್ತದೆ. ಸೊಗಸಾದ ಅಕ್ಕಿ. ಶ್ರೀರಂಗಪಟ್ಣದ ನಾಲೆ ಕೆಳಗೆ ಬೆಳೆಯುವ ಸಣ್ಣಕ್ಕಿಯದಕ್ಕಿಂತ ಒಳ್ಳೆಯದು.

ನಿನ್ನ
ನಾಕ್ಯಮೂ

—:o:—

## ಆರು

ಬೊಂಬಾಯಿ,
೧-೬-೪೭

ಅಣ್ಣ ನಾಡಿಗ,

ನಿನ್ನೆರಡು ಕಾಗದಗಳೂ ೩೦ ನೆಯ ತಾರೀಕೇ ಬಂದುವು. ನನ್ನಿಂದ ಈ ವೇಳೆಗೆ ಉತ್ತರವನ್ನು ನಿರೀಕ್ಷಿಸುತ್ತಿದ್ದಿರಬಹುದು. ಆದರೆ ನಾನು ಒಂದು ವಾರ ತಡವಾಗಿ ಬರೆಯುತ್ತಿದ್ದೇನೆ. ಕ್ಷಮಿಸು.

ಎರಡು ಕಾಗದಗಳಲ್ಲಿ ಚಿಕ್ಕದನ್ನು ಮೊದಲು ಬರೆದಿದ್ದುದನ್ನು ಮೊದಲು ಓದಿದೆ. ಬಹಳ ಕಳವಳವಾಯಿತು. ಅರ್ಥ ಸಹ ಆಗಲಿಲ್ಲ. ಅನಂತರ ಎರಡನೆಯ ಕಾಗದವನ್ನೋದಿದೆ. ನಿನ್ನ ಆಧಿಯ ಕಾರಣ ಅರ್ಥವಾಯಿತು. ನಿನಗೆ ಸಹಾನುಭೂತಿಯನ್ನೀಯಲು ನನ್ನ ಎದೆ ತವಕಿಸಿತು. ಆ ಅಧೀರತೆಯನ್ನು ಆ ಗೀಳನ್ನು ಗೆದ್ದುಕೋ ಅಣ್ಣ; ನೀ ಮನೆ ನೆನಪನ್ನು ಮಾಡಿಕೊಂಡು ಸೋತಿದ್ದ ನಿಮಿಷದಲ್ಲಿ, ಅರೆ ಹುಚ್ಚನಂತೆ ಜಹಜಿನಲ್ಲಿ ನಿನ್ನ ಸಾಮುಗ್ರಿಗಳನ್ನೆಲ್ಲ ತುಂಬಿ ಹಿಂತಿರುಗುವ ಮನಸ್ಸು ಮಾಡಿದ್ದ ನಿಮಿಷದಲ್ಲಿ ಹಿರಿಯರಾದ ದಿವಾಕರರ ಪತ್ರ ಬಂದು ನಿನ್ನ ಚಿತ್ತಕ್ಕೆ ಸ್ಥಿಮಿತ ತಂದಿತಲ್ಲ ಅದಕ್ಕಾಗಿ ನೀನು ಆತನಿಗೆ ಋಣಿಯಾಗಿರಬೇಕು. ನಿನ್ನ ತಮವನ್ನು ಛಿದ್ರಗೊಳಿಸಿದ ದಿವಾಕರನ ಕಿರಣಗಳಿಗಾಗಿ.

ನನಗೆ ಗೊತ್ತಿದ್ದ ಮಟ್ಟಿಗೆ ನಿನ್ನ ಮನಸ್ಸು ಪ್ರೇಮದ ಕಡೆ ಹೋಗಿರಲಾರದು. ಹಾಗೆ ಒಂದುವೇಳೆ ಹೋಗಿದ್ದರೂ ಪ್ರೇಮ ತಪ್ಪಲ್ಲ, ಮೋಹವೂ

ತಪ್ಪಲ್ಲ; ಖಂಡ ರಕ್ತಗಳ ಪ್ರಾಣಿಯಾದ ಮಾನವನಿಗದು ಸಹಜ; ಭಾವುಕರಾದ ಮಂದಿಗಂತೂ ಅನಿರ್ವಾಹವಾದ ಅನುಭವ. ಪ್ರಕೃತಿನಿಯಮ. ಅದಕ್ಕಾಗಿ ಯಾರೂ ನಾಚಬೇಕಾದ್ದಿಲ್ಲ. ಪ್ರೇಮದ ಸೆರೆಯಾಳಾಗಿ, ದಾಸನಾಗಿ, ಮಿಗಿಲಾದ ಧ್ಯೇಯಗಳ ಸಾಧನೆಯಲ್ಲಿ ಹಿಂದೆ ಬೀಳಬೇಡವೆಂದು ಎಚ್ಚರಿಸ ತೊಡಗಿದರೆ ಪ್ರೇಮದಪಾವಿತ್ರ್ಯಕ್ಕೆ ಅಪಮಾನವಾದಂತಾಗುತ್ತದೆ; ನನ್ನ ಮೌಢ್ಯ ತೋರಿಸಿಕೊಂಡಂತಾಗುತ್ತದೆ. ಆದರೆ ಪ್ರೇಮಕ್ಕಿಂತ ಅದೆಂಥದೇ ಪ್ರೇಮವಾಗಲಿ ಮನುಷ್ಯನ ಅಸ್ತಿತ್ವ ದೊಡ್ಡದು. ಆದ್ದರಿಂದ ಅನುಭವಗಳ ಮೂಲಕವೇ ಒಂದು ಸ್ಥೈರ್ಯ ಒಂದು ಶಕ್ತಿ ಉಂಟಾಗುತ್ತದೆ. ಸಾಗರ ಮಂಥನದಲ್ಲಿ ಅಮೃತ, ಲಕ್ಷ್ಮಿ, ಚಂದ್ರ, ಕಲ್ಪವೃಕ್ಷೇತ್ಯಾದಿಗಳು ಜನಿಸಿದುವಂತೆ. ಈ ಮೋಹಾಂಬುಧಿಯ ಮಂಥನದಿಂದಚಿತ್ತಸ್ಥೈರ್ಯದ ಶ್ರೀ ಲಭಿಸುವುದು. ಪ್ರೇಮದ ಮೇಲೆ ಒಂದು ದೊಡ್ಡ ವ್ಯಾಖ್ಯಾನವನ್ನೇ ಬರೆದುಬಿಟ್ಟೆ. ಹೋಗಲಿ ಬಿಡು ನಿನಗೇಕೆ ಅದರ ಚಿಂತೆ. ದಿವಾಕರರೆಂದಿರುವಂತೆ ನಿನ್ನ ಸದ್ಯಧ್ಯೇಯವನ್ನು ಕೈಗೂಡಿಸಿಕೊಂಡು ಮಹಾ ಧ್ಯೇಯದ ಅರ್ಜನೆಗೆ ಸನ್ನದ್ಧನಾಗಿ ಬಾ.

ಸಂಜೀವನಿಗೆ ಈಚೆಗೊಂದು ವಾರ ಮೈ ಚೆನ್ನಾಗಿರಲಿಲ್ಲ. ಈಗ ಆರೋಗ್ಯವಾಗಿದ್ದಾನೆ. "ಕಾಮರ್ಸ್" ಜೀವನ ಅವನ ಮನಸ್ಸಿಗೆ ಒಪ್ಪಿದಂತಿದೆ. ಶ್ರೀ ವೆಂಕಟೇಶಮೂರ್ತಿಯವರೊಡನೆ ಕೆಲಸ ಮಾಡುವುದೇ ಒಂದು ಸಂತೋಷ ಎಂದ.

ನೀನು ಸೈರಕ್ಯೂಸ್ ಬಿಟ್ಟೆಯಂತೆ. ಯಾವುದೋ ಪತ್ರಿಕೆಯಲ್ಲಿ ಕೆಲಸಮಾಡುತ್ತಿದ್ದೆಯೆಂತೆ. ಅದೊಂದನ್ನೂ ನನಗೆ ತಿಳಿಸಲೇ ಇಲ್ಲವಲ್ಲ. ಮುಂದೇನು ಮಾಡಬೇಕೆಂದಿರುವೆ? ಯಾವ ವಿಶ್ವವಿದ್ಯಾನಿಲಯ ಸೇರುವೆ? ಯಾವುದಾದರೊಂದು ಡಿಗ್ರಿ ಡಿಪ್ಲೊಮಾ ಲಗತ್ತಿಸಿಕೊಳ್ಳದೆ ಹಿಂದಿರುಗಬೇಡ. ಏನೇ ಆಗಲಿ, ಅದೊಂದು ನಿಶ್ಚಯ ಮಾಡಿಕೋ. ದೇಶ ನೋಡು. ಅಲ್ಲಿನ ಸಾಹಿತ್ಯದ ನಿಕಟ ಪರಿಚಯ ಪಡೆದುಕೋ.

ಗೆಳೆಯರನ್ನು ಬೆಳೆಸಿಕೊ. ವಿವಿಧ ಬುಡಕಟ್ಟುಗಳಿಂದ, ನಾಡುಗಳಿಂದ, ನುಡಿ ಸಮುಚ್ಚಯಗಳಿಂದ ಬಂದರೂ ಒಂದೆರಡೇ ತಲೆಮಾರುಗಳಲ್ಲಿ ಹೊಸ ರಾಷ್ಟ್ರದವರಾಗಿ ಬಿಟ್ಟಿರುವ ಅಮೇರಿಕನ್ನರ ಗುಟ್ಟನ್ನರಿತುಕೋ. ವಯಸ್ಸಿನಲ್ಲಿ ಕಿರಿದಾದರೂ ಜಗತ್ತಿನ ರಾಷ್ಟ್ರ ಶ್ರೇಣಿಯಲ್ಲಿ ಪ್ರಪ್ರಥಮವಾಗಿರುವ ಈ ಆಶ್ಚರ್ಯಕರ ಜನಾಂಗದ ಆಂತರಿಕಶಕ್ತಿಯೇನು, ಕಂಡುಕೋ. ಗಂಥರನ Inside U.S.A. ಓದಿಲ್ಲ. ಈ ದೇಶಕ್ಕಿನ್ನೂ ಬಂದಿದೆಯೋ ಇಲ್ಲವೋ.

ಇನ್ನು ನಮ್ಮ ಗೆಳೆಯರ ಮಾತಾಡೋಣ. ವರದ ಯಥಾಪ್ರಕಾರ ಇದ್ದಾನೆ. ಎಂ. ವಿ. ಕಿಟ್ಟು ಸಹ ಮೈಸೂರಲ್ಲೇ, ಹೆಂಡತಿಯನ್ನು ಕರೆ ತಂದಿದ್ದಾನಂತೆ, ಅಡಿಗನ ಎಂ.ಎ. ಪರೀಕ್ಷೆಗಳು ನಡೆಯುತ್ತಿರಬೇಕು. ಎಚ್. ಜಿ. ಸೂರ್ಯನಾರಾಯಣ ಸಹ ಪರೀಕ್ಷೆಗೆ ಹೋಗಿದ್ದಾನೆ. ನಮ್ಮ ನಾಗರಾಜ ಪರೀಕ್ಷೆಗೆ ಈಸಲ ಕುಳಿತುಕೊಳ್ಳಲಿಲ್ಲ. ಆನಂದರಾವ್ ನಾನೂ ಇತ್ತೀಚೆಗೆ ಕಾಗದ ಪರಸ್ಪರ ಬರೆಯಲಿಲ್ಲ. ಭರತರಾಜಾಸಿಂಗ್ ಆಗಸ್ಟನಲ್ಲಿ ಇಂಗ್ಲೆಂಡಿಗೆ ಹೊರಡಬಹುದು. ಗುರು ಈಗಲ್ಟರ್ ಹಿಂದಿರುಗಿದನು. ಅನಂತನಾರಾಯಣನ ಎರಡು ಹೊಸ ಪುಸ್ತಕ ಬಂದವು. ಒಂದು ಪದ್ಯ ಸಂಕಲನ. ಇನ್ನೊಂದು ಕಾದಂಬರಿ. ಪಿ. ಕೃಷ್ಣಮೂರ್ತಿಯವರಿಗೆ ಬೆಂಗಳೂರಿಗೆ ವರ್ಗವಾಯಿತಂತೆ. ಸುಖತೀರ್ಥ ಮದುವೆ ಮಾಡಿಕೊಂಡನಂತೆ. ಈ ಊರಲ್ಲೇ ಇದ್ದಾರೆ. ಎಂ. ಎ. ವಾಸುದೇವರಾವ್ ಎಂ. ಎಚ್. ಹಾಗೆ ಕಾರ್ಯದರ್ಶಿ ಅಂತೆ. ಪವಮಾನ ಮಿಲಿಟರಿ ಸೇರಿದನಂತೆ. ಶ್ರೀಧರನೀಗ ಸಿಕಂದರಾಬಾದಿನಲ್ಲಿ ಇದ್ದಾನಂತೆ.

ಬೇಗ ಬರಿ.

ಶೌರಿ.

—:o:—

## ಏಳು

ಬೊಂಬಾಯಿ,
೯-೮-೪೭

ಅಣ್ಣ ನಾಡಿಗ,

ಮಹಾ ದಿನದಲ್ಲಿ ನಿನಗೆ ಕಾಗದ ಬರೆಯುತ್ತಿದ್ದೇನೆ. ಇಂದು ಆಗಸ್ಟ್ ೯. ನಾವು ನಿಜವಾದ ಜನ್ಮ ತಾಳಿ ಐದು ವರ್ಷವಾಯಿತು. ನಮ್ಮ ನಿಕಟ ಸ್ನೇಹ ಆರಂಭಿಸಿಯೂ ಸುಮಾರು ಐದು ವರ್ಷದ ಸುಮಾರಿಗೆ ಬಂತು. ಈ ಕಾಗದ ನಿನಗೆ ಇನ್ನೂ ಮಹತ್ವದ ದಿನವಾದ ಆಗಸ್ಟ್ ೧೫ ರಂದು ತಲಪಬಹುದು. ದೇಶದ ಸ್ವಾಧೀನತಾ ಸಮಾರಂಭವನ್ನು ನೀನು ೧೨,೦೦೦ ಮೈಲಿಗಳ ದೂರದಿಂದ ಆಚರಿಸುತ್ತಿರುವೆ. ನಾನು ನಮ್ಮ ಜನರ ನಡುವೆಯೇ ಇದ್ದು ಅವರು ಪಡುತ್ತಿರುವ ಸಂತೋಷವನ್ನು ವೀಕ್ಷಿಸುತ್ತಿದ್ದೇನೆ. ಆಹಾರದ, ಆರೋಗ್ಯದ, ಹಣದ, ಕಡೆಗೆ ಬರೀ ಜೀವನುರಕ್ಷಿತತೆಯ ಸಹಸ್ರಾರು ಆತಂಕ ಚಿಂತೆ ಬಾಧೆಗಳಿಲ್ಲದಿದ್ದರೆ ನಮ್ಮ ಜನ ಇನ್ನೂ ಎಷ್ಟು ವೈಭವದಿಂದ ಈ ಬಿಡುಗಡೆಯ ಹಬ್ಬದ ದಿನ ಮೆರೆಯುತ್ತಿದ್ದರೋ ಏನೋ? ನೂರೈವತ್ತು ವರ್ಷಗಳಿಂದ ಅರೆ ಹೊಟ್ಟೆಯಲ್ಲಿ ಕಡೆಗಣಿಸಿ ಬಿದ್ದಿದ್ದ ನಮ್ಮಲ್ಲಿ ಸುಖಪಡುವುದಕ್ಕೂ ಚೈತನ್ಯವಿಲ್ಲವೋ ಎನ್ನುವ ಹಾಗೆ ಒಂದೊಂದು ಸಲ ಕಾಣುತ್ತೆ. ಹತ್ತು ವರ್ಷ ಒಂದೇ ಕತ್ತಲೆ ಕೋಣೆಯಲ್ಲಿ ಕೂಡಿ ಹಾಕಲ್ಪಟ್ಟಿದ್ದವನನ್ನು ಇದ್ದಕ್ಕಿದ್ದಂತೆ ಭಾಸ್ಕರನ ದಿವ್ಯ ಕಿರಣಗಳ ಪ್ರಕಾಶದೊಳಗೆ ತಂದರೆ ಅವನು ಹರ್ಷದ ಕೇಕೆಗಳನ್ನು ಹಾಕದೆ ಹೇಗೆ ತಬ್ಬಿಬ್ಬಾಗಿ ಅತ್ತಿತ್ತ ನೋಡುತ್ತಾನೋ ಹಾಗಾಗಿ ಬಿಟ್ಟಿದೆ ನಮ್ಮ ಜನರ ಸ್ಥಿತಿ. ಈ ಹಬ್ಬಕ್ಕೆ ಎಷ್ಟು ಉತ್ಸಾಹ ಇರಬೇಕೋ ಅದರಲ್ಲಿ ಹತ್ತರಲ್ಲಿ ಒಂದು ಪಾಲೂ ಭಾರತದಲ್ಲಿ ಈಗ ಇಲ್ಲ. Economic Battle of Britain ಈ ಹತ್ತು ಹನ್ನೆರಡು ತಿಂಗಳಲ್ಲಿ ಉಲ್ಬಣಿಸಿಕೊಂಡಿದ್ದರೆ, Battle of India ಪ್ಲಾಸೀ ಕದನದ ಕಾಲದಿಂದಲೂ ಉಲ್ಬಣ ಸ್ಥಿತಿಯಲ್ಲೇ ಇದೆ. ಈ ಯಾತನೆಯಲ್ಲಿ ನಿಜವಾದ ಸುಖ ಹೇಗೆ ಬಂದೀತು?

ಇನ್ನು ನಿನ್ನ ವಿಷಯಕ್ಕೆ ಬರೋಣ.

ನಿನ್ನ ಮನಸ್ಸು ಎಣೆಯಿಲ್ಲದ ತಳಮಳದಲ್ಲಿ ಬಿದ್ದಿದೆಯೆಂದು ಕೇಳಿ ನನಗೆ ಬಹಳ ಖೇದವಾಗುತ್ತಿದೆ. ಯಾಕೋ ನಾಡಿಗ! ಅಭೀಃ ಅಭೀಃ ಎಂದು ನಿನಗೆ ನೀನು ಹೇಳಿಕೊಳ್ಳಲಾರೆಯಾ? ಗೆಳೆಯ ಅಡಿಗನ "ಕಲ್ಲಾಗು, ಕಲ್ಲಾಗು" ನುಡಿಯ ಕರಣದ ಸತ್ಯವನ್ನು ಕಂಡುಕೊಳ್ಳಲಾರೆಯಾ, ತಂದುಕೊಳ್ಳಲಾರೆಯಾ? ಸಾಧ್ಯ ನಿನಗೆ. ನೀನು ಸಾಧಕ. ಕರ್ತೃತ್ವ ಶಕ್ತಿ ಪಡೆದಿರುವವ. ಅದನ್ನು ಶ್ಲಾಘನೀಯವಾದ ರೀತಿಯಲ್ಲಿ ಒಂದೆರಡೇಕೆ, ಹತ್ತಾರು ಸಲ ತೋರ್ಪಡಿಸಿಕೊಂಡಿರುವವ. ಹಲುಬುವುದು ತರವಲ್ಲ. ಎದೆಯನ್ನು ಅಮುಕಿಟ್ಟುಕೋ. ಸ್ಥಿರಯೋಗ ತಂದುಕೋ. ಸ್ವಸಾಮರ್ಥ್ಯ, ಧೃತಿ ತೋರಿದಲ್ಲಿ ನಿನ್ನ ಚಿಂತನ ಮಂಥನದಿಂದ ಚಿಂತಾಮಣಿಯು ಬಂದೀತು. ಕಲ್ಪತರವೂ ಎದ್ದೀತು. ಒಂದು ವರ್ಷ ದೀಕ್ಷೆ ತೊಟ್ಟವನಂತೆ ದುಡಿದು ಬರಿಯ ಸ್ವಪ್ನದ ಮಾತಿನಂತಿದ್ದ ಅಮೇರಿಕಾ ಯಾನವನ್ನು ನಿಜದ ಮಾತಾಗಿ ಮಾಡಿಕೊಂಡು, ಎಲ್ಲರ ಕೈಯ್ಯಲ್ಲೂ ಭಲೆಯೆನಿಸಿಕೊಂಡವನು, ಇಲ್ಲಿಗೆ ಯಾಕೆ ಬಂದೆನೋ ಎಂದು ವಿಧವೆಯಂತೆ ಗೋಳಿಡುವುದು ತರವೇ? ದೂರ ದೇಶದಲ್ಲಿರುವಾಗ ಮನೆಯ ಕಡೆ, ಆತ್ಮೀಯರ ಕಡೆ, ಪ್ರೇಮಿಸಿದವರ ಕಡೆ, ಇಲ್ಲದುದರ ಕಡೆ, ದೊರಕದುದರ ಕಡೆ ಗೀಳು ಹುಟ್ಟುವುದು ಮನುಷ್ಯ ಮಾತ್ರನಾದವನಿಗೆ ಸಹಜವೇ. ಅದನ್ನು ಹೇಗೆ ಎಷ್ಟರಲ್ಲಿಟ್ಟಿರಬೇಕೋ ಅಷ್ಟರಲ್ಲಿಟ್ಟುಕೊಳ್ಳದೆ ಹುತ್ತವನ್ನು ಹಿಮಾಲಯವನ್ನಾಗಿ ಮಾಡಿಕೊಳ್ಳುತ್ತಿದ್ದೀಯಲ್ಲ? ಈ ಪಶ್ಚಾತ್ತಾಪವನ್ನು ಸ್ವಕನಿಕರವನ್ನು ಕಿತ್ತೊಗೆ. ನಾನು ನಿನ್ನ ಬಳಿಯಿದ್ದಿದ್ದರೆ ಏನು ಮಾಡುತ್ತಿದ್ದೆ ಗೊತ್ತೇ? ನಿನ್ನನ್ನು ಮೂದಲಿಸಿ, ಹಿಯಾಳಿಸಿ, ಗೇಲಿ ಹಬ್ಬಿಸಿ ನಿನಗೆ ನನ್ನ ಮೇಲೆ ರೋಷ ಬರುವಂತೆ ಮಾಡಿ ನಿನ್ನೀನಿರ್ವೀರ್ಯವಾದವನ್ನು ಮುರಿಯುತ್ತಿದ್ದೆ. ಇನ್ನಾದರೂ ನಿನ್ನ ಆತ್ಮಭರ್ತ್ಸನವನ್ನು ಸಾಕುಮಾಡು. ಎದ್ದೇಳು. ವಿವೇಕಾನಂದರ ಮಾತನ್ನು ನೆನಪಿಗೆ ತಂದುಕೋ.

ನಿನ್ನ ಕಾಗದ ಬಂದ ಬಹಳ ದಿನ ತಡೆದು ಉತ್ತರ ಬರೆಯುತ್ತಿದ್ದೇನೆ. ನಾನು ಒಡನೆಯೇ ಉತ್ತರ ಬರೆಯುವೆನೆಂದು ನೀನು

ನಿರೀಕ್ಷಿಸಿರುತ್ತಿಯೆಂದೇ ತಡಮಾಡಿದೆ. ನನ್ನಿಂದ ನಿನಗೆ ಸಮಾಧಾನ ಸಿಗುವಂತಾಗಬಾರದು. ಆ ಸಮಾಧಾನ ನಿನಗೆ ನಿನ್ನಿಂದಲೇ ದೊರಕಬೇಕು. ಜ್ಞಾಪಕದಲ್ಲಿಟ್ಟುಕೋ. ನೀನು, ನಾನು, ಮತ್ತೊಬ್ಬ, ಎಲ್ಲರೂ ಈ ಅನಂತ ನಿಸ್ಸೀಮ ವಿಶ್ವದಲ್ಲಿ ತಪ್ಪುತಪ್ಪಾಗಿ ತೆವಳುತ್ತಿರುವ ಕ್ರಿಮಿಗಳು.

ನೀನು ನ್ಯೂಯಾರ್ಕಿನಲ್ಲಿ ಒಂದಷ್ಟು ಧೂಳೆಬ್ಬಿಸಿದೆ. ಅದನ್ನು ಈ ವಾರದ Forum ನಲ್ಲಿ ಓದಿದುದಾಗಿ ನನ್ನ ಸ್ನೇಹಿತರೊಬ್ಬರು ತಿಳಿಸಿದರು. ಆಧ್ಯಾತ್ಮಿಕ ನ್ಯೂಯಾರ್ಕಿನಲ್ಲೇನೇನು ಸಾಹಸ ಮಾಡಿರುವೆ? ಅದು ಹೇಳು.

ರಾಜ್ಯಾಂಗ ಸಭೆಗೆ ಮೈಸೂರಿನಿಂದ ಚುನಾಯಿತರಾದವರು—ಶ್ರೀ ಕೆ. ಸಿ. ರೆಡ್ಡಿ, ಶ್ರೀ ಎಸ್. ವಿ. ಕೃಷ್ಣಮೂರ್ತಿರಾವ್, ಶ್ರೀ ಗುರುವಾರೆಡ್ಡಿ, ಶ್ರೀ ಡಿ. ಹೆಚ್. ಚಂದ್ರಶೇಖರಯ್ಯ–ನಾಲ್ವರು. ಸ್ವಕಲ್ಪಿತ ಮುಖಂಡರು–ಆರ್ಕಾಟ್ ರಾಮಸ್ವಾಮಿ ಮೊಲಿಯಾರ್ರು. ಸರಕಾರದಿಂದ ನಾಮಕರಣ-ಲೀಗಿನ ಮಹಮುದ್‌ಷರೀಫ್, ನಿಮ್ಮ ವರ್ಗದ ಶ್ರೀ ಟಿ. ಚೆನ್ನಯ್ಯ. ಜವಾಬ್ದಾರಿ ಸರ್ಕಾರಕ್ಕಾಗಿ ಕೂಡಲೇ ಸತ್ಯಾಗ್ರಹ ಹೂಡಬೇಕೆಂಬುದಾಗಿ ನಿಶ್ಚಯವಾಗಿದೆ. ಹೈದರಾಬಾದಿನಲ್ಲಿ ತೀವ್ರ ವೇಗದಿಂದ ಸತ್ಯಾಗ್ರಹ ನಡೆಯುತ್ತಿದೆ.

ನಿನ್ನ ಗೆಳೆಯರು ಸಾಹನಿ, ರಾವ್, ಬಂದರು. ಆ ವೃತ್ತಾಂತ ಸಂಜೀವ ಬರೆದಿರಬಹುದು. ಹೆಚ್ಚೇನು?

ಶೌರಿ.

—:o:—

## ಎಂಟು

ಕೊಲಂಬಿಯ, ಮಿಸ್ಸೋರಿ,
೩-೯-೪೭

ಅಯ್ಯಾ ಶೌರಿ,

ನಿನ್ನ ಆಗಸ್ಟ್ ೯ ರ ಕಾಗದ ಸ್ವಾತಂತ್ರ್ಯ ದಿನಾಚರಣೆಯ ದಿನವೇ ಬಂತು. ನನಗೆ ತುಂಬಾ ಸಂತೋಷವಾಯಿತು. ಈ ಕಾಗದದಲ್ಲಿ ಮತ್ತೇನನ್ನೂ ಬರೆಯದೇ, ಈ ದೇಶದಲ್ಲಿ ನಾವು ಸ್ವಾತಂತ್ರ್ಯ ದಿನಾಚರಣೆಯನ್ನು ಹೇಗೆ ನಡೆಸಿದೆವು ಎಂಬುದನ್ನು ಮಾತ್ರ ಚಿತ್ರಿಸುತ್ತೇನೆ.

ಆಗಸ್ಟ್ ೧೫ ನೇ ತಾರೀಖು. ಅಂದು ಅಮೇರಿಕಾದ ಜನ ತೋರಿಸಿದ ಉತ್ಸಾಹ, ಹುಮ್ಮಸ್ಸು, ಆನಂದ ನನ್ನ ಮನಸ್ಸಿನ ಮೇಲೆ ಅಚ್ಚಳಿಯದೆ ನಿಂತಿದೆ. ಭಾರತಕ್ಕೆ ಬಂದ ಸ್ವಾತಂತ್ರ್ಯವು ತಮ್ಮ ನಾಡಿಗೇ ಬಂದ ಹಾಗೆ ಭಾವಿಸಿ ಕುಣಿದಾಡಿದರವರು. ಆ ಜನ ನಮ್ಮೊಂದಿಗೆ ಜೊತೆಯಾಗಿ ಬೆರೆತು ಸ್ವಾತಂತ್ರ್ಯದ ಸುಧಾಪಾನ ಮಾಡಿದರು. ಮಿಸ್ಸೋರಿ ಸಂಸ್ಥಾನದ ಕೊಲಂಬಿಯಾದಲ್ಲಿ ನಾವಿದ್ದುದು ಆರೇ ಜನ ಭಾರತೀಯ ವಿದ್ಯಾರ್ಥಿಗಳು. ಅಂದು ನಾವು ಸ್ವಾತಂತ್ರ್ಯೋತ್ಸವವನ್ನು ನಮ್ಮ ವಿಶ್ವವಿದ್ಯಾನಿಲಯದಲ್ಲಿ ಆಚರಿಸಿದೆವು. ತುಂಬಾ ವಿಜೃಂಭಣೆಯಿಂದ ಉತ್ಸವ ನಡೆಯಿತು. ಅದಕ್ಕೆ ಕಾರಣ ಅಮೇರಿಕನ್ನರು ನಮಗಿತ್ತ ಸಹಕಾರವೇ. ನ್ಯೂಯಾರ್ಕಿನಿಂದ **ಶ್ರೀಮತಿ ಪರ್ಲ್ ಬಕ್** ಕೂಡಾ ಸಂದೇಶ ಕಳುಹಿಸಿದ್ದರು. ಕೊಲಂಬಿಯಾದ ೩೫,೦೦೦ ಜನರಿಗೂ ನಮ್ಮ ಈ ಉತ್ಸವ ಏನೆಂದು ತಿಳಿದಿತ್ತು. ಆ ದಿನ ಅವರು ಎಷ್ಟು ಆಸಕ್ತಿ ತೋರಿಸಿದರೆಂಬುದಕ್ಕೆ ಕೇವಲ ಒಂದೆರಡು ಉದಾಹರಣೆಗಳನ್ನು ಕೊಡುವೆ.

ಅಂದು ಬೆಳಿಗ್ಗೆ ನಮ್ಮ ಪ್ರಭಾತಫೇರಿಯಾದ ಮೇಲೆ ಭಾರತೀಯ ವಿದ್ಯಾರ್ಥಿಗಳಾದ ನಾವೆಲ್ಲರೂ ಒಟ್ಟಿಗೆ ಒಂದು ಉಪಹಾರ ಗೃಹಕ್ಕೆ ಊಟಕ್ಕೆ ಹೋದೆವು. ಅಂದು ನಾವೆಲ್ಲಾ ಭಾರತೀಯ ಉಡುಪನ್ನೆ ಧರಿಸಿ

ದ್ದೆವು. ಉಪಹಾರ ಗೃಹದ ಮಾಲೀಕನು, ನಾವು ಬಂದೊಡನೆಯೇ ನಮ್ಮನ್ನು ಸಂತೋಷದಿಂದ ಸ್ವಾಗತಿಸಿ ಊಟಕ್ಕೆ ಹಾಕಿದನು. ತಾನೇ ಬಡಿಸಿದನು. ಭಾರತದ ಬಗ್ಗೆ ಮಾತುಕತೆಗಳಾದವು. ಅನಂತರ ಊಟ ಮಾಡಿದ ಮೇಲೆ ನಾವು ಹಣ ಕೊಡಲು ಹೋದೆವು. ಆತ ಮುಗುಳು ನಗೆಯಿಂದ ' ಹಣ ಬೇಡ ' ಎಂದನು. ಏಕೆ ಎಂದು ಕೇಳಿದಾಗ ಆತ ಹೇಳಿದ, ' ಗಾಂಧೀ ದೇಶದ ನಿಮಗೆ ಆ ಪುಣ್ಯಾತ್ಮನ ಸಾಹಸದಿಂದ ಸ್ವಾತಂತ್ರ್ಯ ಬಂದಿದೆ. ಅಹಿಂಸೆಯಿಂದ ಸ್ವಾತಂತ್ರ್ಯ ಗಳಿಸಿದ್ದೀರಿ, ನಿಮಗೆ ನಾವು ಇಷ್ಟು ಕಾಣಿಕೆಯನ್ನು ಕೊಡಬೇಡವೇ ? ' ನಾವು ಮರುಮಾತ ನಾಡಲಿಲ್ಲ. ಆತನ ದೇಶಾಭಿಮಾನವನ್ನು ಮೆಚ್ಚಿ ಮುಂದೆ ಸಾಗಿದೆವು.

ಅದೇ ದಿನ ಸಂಜೆ ಇನ್ನೊಂದು ನಿದರ್ಶನವೂ ಆಯಿತು. ನಮ್ಮ ಸಂತೋಷ ಮತ್ತು ಗೌರವವನ್ನು ವ್ಯಕ್ತಮಾಡಲು ಆ ದಿನ ಸಂಜೆ ಭಾರತದ ಪ್ರಧಾನಿ ಪಂಡಿತ ನೆಹ್ರೂ, ಕಾಂಗ್ರೆಸ್ ಅಧ್ಯಕ್ಷರು ಮತ್ತು ಗಾಂಧೀಜಿಯವರಿಗೆ ತಂತಿ ಕೊಡಲು **ವೆಸ್ಟರನ್ ಯೂನಿಯನ್ನಿಗೆ** ಹೋದೆವು. ಅಮೇರಿಕಾದಲ್ಲಿ ತಂತಿ ಇಲಾಖೆಯು ಖಾಸಗಿ ಉದ್ಯಮ ವಾಗಿದೆ. ಸರ್ಕಾರದ ಕೈವಾಡದಲ್ಲಿಲ್ಲ. ಇದನ್ನು ನಡೆಸುವವರೇ ವೆಸ್ಟರನ್ ಯೂನಿಯನ್ ಸಂಸ್ಥೆಯವರು. ನಾವು ತಂತಿ ಕೊಟ್ಟು ಹಣ ಕೊಡಲು ಹೋದರೆ, ಆ ಸಂಸ್ಥೆಯ ಡೈರೆಕ್ಟರು ನಮ್ಮಿಂದ ಹಣ ತೆಗೆದುಕೊಳ್ಳಲೇ ಇಲ್ಲ. ನಮಗೆ ಆಶ್ಚರ್ಯದ ಜೊತೆಗೆ ಸಂತೋಷವೂ ಆಯಿತು.

ನೋಡಿದೆಯಾ, ಈ ಅಮೇರಿಕನ್ನರಿಗೆ ಅದೆಷ್ಟು ಗೌರವ, ಭಾರತದ ಮೇಲೆ.

ನಿನ್ನ ಕಾಗದ ಓದಿ ನೋಡಿದೆ. ನಾನೇಕೆ ಹಾಗೆ ಮಾಡಿದೆನೆಂದು ಇನ್ನೂ ನನಗೆ ಗೊತ್ತಿಲ್ಲ. ನಿನ್ನ ಮತ್ತು ಸಂಜೀವನ ಸ್ಫೂರ್ತಿಯುತ ಮತ್ತು ಕಾರಣಯುತ ಉತ್ತೇಜನಕ್ಕೆ ನಾ ಕೃತಜ್ಞನಾಗಿದ್ದೇನೆ.

ನಾನೀಗ ಅಮೇರಿಕೆಯ ಜೀವನಕ್ಕೆ ಹೊಂದಿಕೊಂಡು ಹೋಗುತ್ತಲಿದ್ದೇನೆ. ಅಲ್ಲಲ್ಲಿ ಭಾಷಣಗಳಿಗೂ ಪ್ರಾರಂಭಿಸಿದ್ದೇನೆ.

ನಿನ್ನ ಹಿರಿಯರಿಗೆ ನಮಸ್ಕಾರ ತಿಳಿಸು.

ಇತಿ ಹೀಗೆ,
ಕೃಷ್ಣ.

—:o:—

## ಒಂಭತ್ತು

ಕೊಲಂಬಿಯ,
೧೯-೯-೪೭

ಪ್ರಿಯ ಶೌರಿ,

ತಮವೆಂಬ ಬಿರುಗಾಳಿಗೆ ಸಿಕ್ಕ ನನ್ನ ಜೀವನದ ಹಡಗು ಶಾಂತಿ ಸಮುದ್ರವನ್ನು ದಾಟಿ ದಡ ಮುಟ್ಟುವ ಚಿನ್ಹೆಗಳು ಕಾಣಬರುತ್ತಿವೆ. ಆದರೂ ಮಧ್ಯೆ ಬಿರುಸಾದ ಅಲೆಗಳು ಎಲ್ಲಿ ಬಂದು ನನ್ನ ಹಡಗನ್ನು ಮುಳಗಿಸವುದೋ ಎಂದು ಹೆದರಿಕೆ.

ನಿನ್ನೆಯಿಂದ ಕ್ರಮವಾಗಿ ನಮ್ಮ ಕಾಲೇಜು ಆರಂಭವಾಯಿತು. ನಾನೀಗ ಪತ್ರಿಕೋದ್ಯಮದಲ್ಲಿ ಎಂ.ಎ. ಪರೀಕ್ಷೆಗೆ ಓದುತ್ತಲಿದ್ದೇನೆ. ಆದರೆ "B. J." ಡಿಗ್ರಿಗೆ ಓದುವ ವಿಷಯುಗಳನ್ನು ಹೆಚ್ಚಾಗಿ ಓದಬೇಕು. ಎಂ. ಎ. ಗೆ ಒಂದು ವ್ಯಾಸ ಬರೆಯಬೇಕಾಗಿದೆ. "A National Press for India" ಎಂಬ ವಿಷಯ ಆರಿಸಿ ಕೊಟ್ಟಿದ್ದಾರೆ ನಮ್ಮ ಪ್ರೊಫೆಸರರು. ಈ ವಿಷಯದ ಬಗ್ಗೆ ಸಾಹಿತ್ಯ ಇಲ್ಲಿ ಅಷ್ಟಿಲ್ಲ. ಅಲ್ಲಿಂದಲೇ ತರಿಸಿಕೊಳ್ಳಬೇಕಾಗುವುದು. ಈ ಕೆಲಸ ನಿನಗೇ ಹಚ್ಚಬೇಕಾಗಿದೆ. ಏನೇನು ಬೇಕೆಂಬ ವಿವರ ಮುಂದಿನ ಕಾಗದದಲ್ಲಿ ಬರೆಯುವೆ.

**ಡಾ|| ಫ್ರ್ಯಾಂಕ್ ಲ್ಯೂಥರ್ ಮಾಟ್** ಎನ್ನುವವರು ನಮ್ಮ ಹಿರಿಯ ಪ್ರಾಧ್ಯಾಪಕರು. ಮಿಸ್ಸೋರಿ ವಿಶ್ವವಿದ್ಯಾನಿಲಯದ School of Journalism **(ಪತ್ರಿಕೋದ್ಯಮ ಶಾಲೆ)** ನ ಯಜಮಾನರು. ತುಂಬಾ ಒಳ್ಳೆಯವರು. ಭಾರತೀಯ ವಿದ್ಯಾರ್ಥಿಗಳನ್ನು ಕಂಡರೆ ವಿಶೇಷ ಗೌರವ. ಇವರು ಅನೇಕ ಪುಸ್ತಕಗಳನ್ನು ಬರೆದು ಬಹು ಮಾನಿತರಾಗಿದ್ದಾರೆ. American Journalism ಮತ್ತು History of American magazines ಎಂಬ ಪ್ರೌಢ ಗ್ರಂಥಗಳನ್ನು ಬರೆದಿದ್ದಾರೆ. ಇವರಿಗೆ ಇಲ್ಲಿ ನೋಬೆಲ್ ಪಾರಿತೋಷಕಕ್ಕೆ ಸರಿಸಮಾನವಾದ **ಪುಲಿಟ್ಜರ್ ಬಹುಮಾನ** ದೊರೆತಿದೆ.

೧೬ ನೇ ತಾರೀಖು **ಈ** ಊರಿಗೆ ೩೫ ಮೈಲಿ ದೂರವಿರುವ **ಸೆಂಟ್ರೇಲಿಯ** ನಗರಕ್ಕೆ ಹೋಗಿದ್ದೆ. ಅಲ್ಲಿಯ ಬ್ಯಾಪ್ಟಿಸ್ಟ್ ಚರ್ಚಿನವರು ನನ್ನನ್ನು ಅತಿಥಿಯನ್ನಾಗಿ ಆವ್ಹಾನಿಸಿದ್ದರು. **ಭಾರತದ ವಿಭಜನೆ** ಯ ಬಗ್ಗೆ ಮಾತನಾಡಿದೆ. ಎರಡು ಘಂಟೆ ನಡೆಯಿತು ನನ್ನ ಭಾಷಣ. ಅನೇಕರು ಪ್ರಶ್ನೆಗಳನ್ನು ಹಾಕಿ ನನ್ನಿಂದ ಉತ್ತರ ಪಡೆದರು. ಭಾರತದ ಬಗ್ಗೆ ವಿಶೇಷವಾದ ಆಸಕ್ತಿಯನ್ನು ತೋರಿಸಿದರು. ರಾತ್ರಿ ನನ್ನನ್ನು ಕಾರಿನಲ್ಲಿ ಕರೆತಂದು ಬಿಟ್ಟು ಹೋದರು. ಬಿಡಲು ಆ ನಗರದ ಅಧ್ಯಕ್ಷನೇ ಬಂದಿದ್ದ. ಹೋಗುವಾಗ ಒಂದು ಲಕ್ಕೋಟಿಯನ್ನು ನನ್ನ ಕೈಲಿತ್ತ. ಅದರಲ್ಲಿ **೧೫ ಡಾಲರು** ಇದ್ದುವು. ನನ್ನ ಭಾಷಣಕ್ಕಾಗಿ ಆ ಸಂಭಾವನೆ. ಇದೇ ನನ್ನ ಪ್ರಥಮ ಆಶ್ಚರ್ಯ.

ಶ್ರೀ ಎಂ. ವಿ. ರಾಜಗೋಪಾಲ್ ಭಾರತಕ್ಕೆ ಮರಳಿದರೆಂದು ಕೇಳಿದೆ. ಶ್ರೀ ಭರತರಾಜಸಿಂಗ್ ಇಂಗ್ಲೆಂಡಿಗೆ ಹೊರಡುವುದು ಯಾವಾಗ ?

ಇನ್ನೊಂದು ವಿಷಯ ಬರೆಯುವುದು ಮರತೇಬಿಟ್ಟೆ. ಮೊನ್ನೆ ೧೫ ಕ್ಕೆ ಸೆಂಟ್ ಲೂಯಿಸ್ ಪಟ್ಟಣಕ್ಕೆ ಹೋಗಿದ್ದೆ. ಇಲ್ಲಿಂದ ೧೨೫ ಮೈಲಿ ದೂರ. ಬಸ್ಸಿನಲ್ಲಿ ಮೂರು ತಾಸಿನ ಹಾದಿ. ಮಿಸ್ಸೋರಿ

ಸಂಸ್ಥಾನದ ಮುಖ್ಯ ಕೈಗಾರಿಕಾ ಪಟ್ಟಣ. ಅಮೇರಿಕೆಯ ಬಹು ದೊಡ್ಡದಾದ ರೈಲ್ವೆ ಜಂಕ್ಷನ್. ಇಲ್ಲಿ ಹಿರಿಯ ಪತ್ರಿಕೋದ್ಯಮಿ ಪ್ರಾರಂಭಿಸಿದ **ಸೆಂಟ್ ಲೂಯಿಸ್ ಪೋಸ್ಟ್ ಡಿಸ್ಪ್ಯಾಚ್** ಎನ್ನುವ ಮುಖ್ಯವಾದ ಪತ್ರಿಕೆ ಇದೆ. ಈ ಪತ್ರಿಕೆಯ ಸ್ಥಾಪಕ **ಜೋಸೆಫ್ ಪಲಿಟ್ಜರ್.** ಅವನ ಹೆಸರಿನಲ್ಲಿಯೇ 'ಪಲಿಟ್ಜರ್ ಬಹುಮಾನ' ಪ್ರಾರಂಭವಾಗಿದೆ. ಇಲ್ಲೊಂದು ಶ್ರೀರಾಮಕೃಷ್ಣಮಠವಿದೆ. ಶ್ರೀ ಸ್ವಾಮಿ **ಸತ್ಯಬೋಧಾನಂದರೇ** ಇಲ್ಲಿಯ ಪರಿವ್ರಾಜಕರು. ನಾಲ್ಕು ಜನ ಭಾರತೀಯ ವಿದ್ಯಾರ್ಥಿಗಳಿದ್ದಾರೆ ಇಲ್ಲಿಯ ಕಾಲೇಜುಗಳಲ್ಲಿ. ಒಬ್ಬಳು ವಿದ್ಯಾರ್ಥಿನಿ.

ಈ ಸಲಕ್ಕೆ ಇಷ್ಟು ಸಾಕು.

ಇತಿ ಹೀಗೆ

ನಾ ಕೃ ಮೂ

—:o:—

## ಹತ್ತು

ಕೊಲಂಬಿಯ

೬-೧೦-೪೭

ಪ್ರಿಯ ಶೌರಿ,

ನನ್ನ ಹಿಂದಿನ ಕಾಗದ ತಲ್ಪಿರಬಹುದು.

ಈ ವಿಶ್ವವಿದ್ಯಾನಿಲಯದಲ್ಲಿ ಎಂಟು ಜನ ಭಾರತೀಯ ವಿದ್ಯಾರ್ಥಿಗಳಿದ್ದೇವೆ. ಅದರಲ್ಲಿ ನಾವು ಐವರು ಪತ್ರಿಕೋದ್ಯಮದ ಅಭ್ಯಾಸ ಮಾಡುತ್ತಿದ್ದೇವೆ. ಉಳಿದ ಮೂವರು ಇಲ್ಲಿಯ ಸುಪ್ರಸಿದ್ಧವಾದ ವ್ಯವಸಾಯದ ಕಾಲೇಜಿನಲ್ಲಿದ್ದಾರೆ. ಈ ಎಂಟರಲ್ಲಿ ಮೂವರು ಕನ್ನಡಿಗರು.

ನಮ್ಮ ಕಾಲೇಜು ಪತ್ರಿಕೋದ್ಯಮಕ್ಕೆ ಹೆಸರಾದದ್ದು. ಅಮೇರಿಕೆಯ ವಿಶ್ವವಿದ್ಯಾನಿಲಯಗಳಲ್ಲೆಲ್ಲಾ ಮೊದಲು ಪತ್ರಿಕೋದ್ಯಮವನ್ನು ಅಭ್ಯಾಸ ವಿಷಯವಾಗಿ ಹೇಳಿಕೊಡಲು ಪ್ರಾರಂಭಮಾಡಿದ್ದು ಇಲ್ಲಿಯೇ.

ಇಲ್ಲಿ ಸುಮಾರು ೧೦೦೦ ವಿದ್ಯಾರ್ಥಿಗಳು ಬರೀ ಪತ್ರಿಕೋದ್ಯಮವನ್ನೇ ಓದುತ್ತಿದ್ದಾರೆ. ನಾನಾ ದೇಶಗಳಿಂದ ಈ ವಿಷಯವನ್ನು ಓದಲು ಇಲ್ಲಿಗೆ ಬಂದಿದ್ದಾರೆ. ೨೦ ಚೀನಿಯ ವಿದ್ಯಾರ್ಥಿಗಳಿದ್ದಾರೆ. ಇವರಲ್ಲದೆ ಜರ್ಮನಿ, ಫಿಲಿಪ್ಪೈನ್ಸ್, ಕ್ಯೂಬ, ದಕ್ಷಿಣ ಅಮೇರಿಕಾ, ಇಂಗ್ಲೆಂಡ್, ಜೇಕೊಸ್ಲೊವೇಕಿಯ, ಹಾಲೆಂಡ್, ಸ್ಪೈನ್, ನಾರ್ವೆ, ಫ್ರಾನ್ಸ್ ಮತ್ತು ಹೊನಲೂಲುವಿನಿಂದ ಇಲ್ಲಿಗೆ ಓದಲು ವಿದ್ಯಾರ್ಥಿಗಳು ಬಂದಿದ್ದಾರೆ. ಬೆಳಿಗ್ಗೆ ೭-೩೦ ರಿಂದ ಸಾಯಂಕಾಲ ೬ ಘಂಟೆಯವರೆವಿಗೂ ತರಗತಿಗಳು ನಡೆಯುತ್ತಿರುತ್ತವೆ. ಇಲ್ಲಿ ನಮಗೆ ವಾರಕ್ಕೊಮ್ಮೆ ಪರೀಕ್ಷೆ. ಪರೀಕ್ಷೆ ಇಂಥಾ ದಿವಸವೆಂದು ಹೇಳುವುದೇ ಇಲ್ಲ. ವಿಷಯವನ್ನೂ ತಿಳಿಸುವುದಿಲ್ಲ. ನಾವು ಎಲ್ಲದಕ್ಕೂ ತಯಾರಾಗಿರಬೇಕು. ಈ ಪರೀಕ್ಷೆಗಳಲ್ಲಿ ಬಂದ ನಂಬರುಗಳೂ ಕೊನೆಯ ಪರೀಕ್ಷೆಗೆ ಸಹಾಯ ಮಾಡುತ್ತವೆ. ಆದ್ದರಿಂದ ನಾವು ತುಂಬಾ ಜಾಗರೂಕರಾಗಿರಬೇಕಾಗುತ್ತದೆ. ಪ್ರತಿದಿನವೂ ಏನಾದರೊಂದು ಬರೆಯಲು ಕೊಟ್ಟಿರುತ್ತಾರೆ. ಆ ದಿನದ ಪಾಠ ಅಂದೇ ಓದಿಕೊಳ್ಳದಿದ್ದರೆ ತುಂಬಾ ಕಷ್ಟ. ಜೇಜಾರವೇನಯ್ಯ. ಈ ವಿವರ ಸಾಕು ಮಾಡುತ್ತೇನೆ.

ಮೈಸೂರಿನ ವಿದ್ಯಮಾನಗಳು ನನ್ನ ಶಾಂತಿಯನ್ನು ತುಂಡರಿಸ ಹತ್ತಿದೆ. ನನಗೇನಾದರೂ ರೆಕ್ಕೆಗಳಿದ್ದಿದ್ದರೆ ಹಾರಿ ಬಂದುಬಿಡುತ್ತಿದ್ದೆ. ಹಾಸನದ ಸೆರೆಮನೆಯಿಂದ ನಾಲ್ವರು ಕಾಂಗ್ರೆಸ್ ಮುಖಂಡರು ತಪ್ಪಿಸಿಕೊಂಡು ಹೋದರೆಂದು ವರದಿಯಾಗಿದೆ. ಅದರಲ್ಲಿ ಅಣ್ಣ ಕೃಷ್ಣಶರ್ಮರು ಒಬ್ಬರಂತೆ. ಇದರ ಕಥೆ ತಿಳಿಸಪ್ಪಾ. ಈ ಸಲ ವಿದ್ಯಾರ್ಥಿ ಚಳುವಳಿಯ ಮುಖಂಡತ್ವವನ್ನು ಯಾರು ವಹಿಸಿದ್ದರು? ನಮ್ಮ ದೇಶೀಯ ವಿದ್ಯಾಶಾಲೆ ಏನಾದರೂ ಭಾಗವಹಿಸಿತ್ತೆ?

ಅಮೇರಿಕೆಯ ಉಪಾಧ್ಯಕ್ಷನಾಗಿದ್ದನಲ್ಲ, **ಹೆನ್ರಿವಾಲೇಸ್,** ಆತನ ಹೆಸರು ನೀ ಕೇಳಿರಬಹುದು. ಆತ ಈಗ Democratic ಪಕ್ಷದಿಂದ ಹೊರಬೀಳುವ ಸನ್ನಾಹದಲ್ಲಿದ್ದಾನೆ, ಬೇರೊಂದು Progressive

Democratic Party ಕಟ್ಟುವುದರಲ್ಲಿ ಸನ್ನದ್ಧನಾಗಿದ್ದಾನೆ. ಆತ ನವೆಂಬರ್ ೯ಕ್ಕೆ **ಸೆಂಟ್ ಲೂಯಿಸ್** ಪಟ್ಟಣಕ್ಕೆ ಬರುತ್ತಾನೆ. ಆತನಿಗೆ ಬರೆದು ಮೊದಲೇ ಭೇಟಿ ಗೊತ್ತುಮಾಡಿಕೊಂಡಿದ್ದೇನೆ. ನಾ ಅಂದು ಅಲ್ಲಿಗೆ ಹೋಗಿ ನಮ್ಮ ಭೇಟಿಯಾದನಂತರ ವಿವರ ಬರೆಯುತ್ತೇನೆ.

'ಕರ್ಮವೀರ' ವಾರ ಪತ್ರಿಕೆಯಲ್ಲಿ ನನ್ನ ಲೇಖನಗಳು ಬರುತ್ತಿವೆಯಂತೆ. ನೀನೇನಾದರೂ ನೋಡಿದ್ದಿಯೇನು ?

ನಿನ್ನ ಸಹೋದರರಾದ ಚಿ|| ಮೋಹನ, ಚಿ|| ರಾಜು ಹೇಗಿದ್ದಾರೆ. ಅವರಿಗೆ ನನ್ನ ಆಶೀರ್ವಾದ.

ಪ್ರೀತಿಯಿರಲಿ.

ನಿನ್ನ
ನಾಕೃಮೂ

—:o:—

## ಹನ್ನೊಂದು

ಬೊಂಬಾಯಿ,
೧೧—೧೧—೪೭.

ಅಣ್ಣ ನಾಡಿಗ,

ನಿನ್ನ ಮೂರು ಕಾಗದಗಳಿಗೂ ಉತ್ತರ ಬರೆಯದಿರುವುದು ಮುನಿಸಿನಿಂದಲ್ಲ. ನಿನ್ನ ಪ್ರಶ್ನೆಗಳ ಬಗ್ಗೆ ಪೂರ್ತಿ ತನಿಖೆ ನಡೆಸಿ ಬರೆಯೋಣವೆಂಬ ಇಚ್ಛೆ. ಇನ್ನೊಂದು ವಾರದಲ್ಲಿ ದೊಡ್ಡ ಕಾಗದವನ್ನು ನೀ ನಿರೀಕ್ಷಿಸಬಹುದು. ಹರಟೆಯಲ್ಲಾ ಮುಂದಿನ ಕಾಗದದಲ್ಲಿ.

ಶೌರಿ.

—:o:—

## ಹನ್ನೆರಡು

ಕೊಲಂಬಿಯಾ,
೨೪—೧೧—೪೭.

ಚಿ|| ಶೌರಿ,

ನನ್ನ ಮೂರು ಕಾಗದಗಳಿಗೆ ಉತ್ತರ ರೂಪವಾಗಿ ಬಂದ ನಿನ್ನ ಮೂರು ಸಾಲಿನ ಕಾಗದಕ್ಕೆ ಈ ಮೂವತ್ತು ಸಾಲಿನ ಉತ್ತರ. ನೀನು ಮೈಸೂರು ಸತ್ಯಾಗ್ರಹ ಸಮರದಲ್ಲಿ ಭಾಗ ತೆಗೆದುಕೊಳ್ಳಲು ಹೋದದ್ದು ಸಂಜೀವನಿಂದ ತಿಳಿಯಿತು. ನನಗೂ ಹೊರಟುಬಿಡೋಣವೆ ಅನ್ನಿಸಿತು. ಈ ಸಲ ದುಡುಕಲಿಲ್ಲ. ಅದೀಗ ಸಾಧ್ಯವಿಲ್ಲ. ನಾ ಬಂದ ಕರ್ತವ್ಯ ಎದುರಿಗೆ ಬಂದು ನಿಂತು ಕ್ಷಣಕಾಲದಲ್ಲಿ ಬಂದ ಆ ಯೋಚನೆಯನ್ನು ತಡೆ ಹಿಡಿದೆ. ಬೊಂಬಾಯಿಯಿಂದ ಹುಬ್ಬಳ್ಳಿ ಒಂದು ರಾತ್ರಿಯ ಪ್ರಯಾಣ. ಕೊಲಂಬಿಯಾದಿಂದ ಮೈಸೂರು ಇಡೀ ಮೂವತ್ತು ರಾತ್ರಿಯ ಪ್ರಯಾಣ ಹಡಗು ರೈಲುಗಳಲ್ಲಿ. ಜೊತೆಗೆ ೧೫೦೦ ರೂ. ದಾರೀ ಖರ್ಚು. ಅಂತೂ ಕರ್ತವ್ಯ - ದೇಶಾಭಿಮಾನಗಳ ನಡುವೆ, ಈ ಪರದೇಶದಲ್ಲಿ ಕರ್ತವ್ಯಕ್ಕೆ ಮೊದಲನೆಯ ಸ್ಥಾನ ಕೊಟ್ಟು, ದೇಶಾಭಿಮಾನ ತೋರಿಸಲು ಸ್ವಲ್ಪ ಕಾಲ ತಳ್ಳಿದೇನೆ. ಈ ಮನಸ್ಸಿನ ತಾಕಲಾಟದಲ್ಲಿ ನಿರ್ವೀರ್ಯನಾಗಿ ಕೆಲಕಾಲ ನಿರಾಶನಾದುದೂ ಉಂಟು. ಕೊನೆಗೆ ಪುನಃ ನನ್ನನ್ನು ನಾನೇ ಗೆದ್ದೆ. ಹಾಗೆಂದು ಇನ್ನೂ ಇಲ್ಲಿಯೇ ಇದೇನೆ. ನಿನ್ನನ್ನು ಅಭಿನಂದಿಸಬೇಕು. ದೇಶದ ಕರೆ ಬಂದಾಗ ಒಳ್ಳೆಯ ಕೆಲಸ ಬಿಟ್ಟುಕೊಟ್ಟು ನೀ ಹೋದೆ ನೋಡು, ಅದು. ೧೯೪೨ರ ಚಳುವಳಿಯಾದ ನಂತರ ನಿನ್ನನ್ನು ಟೀಕಿಸುತ್ತಿದ್ದರಲ್ಲ, ಅವರಿಗೆ ಸರಿಯಾದ ಉತ್ತರ ಕೊಟ್ಟೆ.

ನವೆಂಬರ್ ೯ ಕ್ಕೆ ಹೆನ್ರಿ ವಾಲೇಸ್‌ರನ್ನು ಭೇಟಿ ಮಾಡಿದೆ. ನನ್ನ ಜೊತೆಗೆ ಜಗದೀಶಚಂದ್ರ ಅರೋರಾ ಎನ್ನುವ ಭಾರತೀಯ ವಿದ್ಯಾರ್ಥಿಗೆಳೆಯರೂ ಬಂದಿದ್ದರು. ಕೊಲಂಬಿಯಾದಿಂದ ವಿದ್ಯಾರ್ಥಿ ತಂಡ

ವೊಂದು ಸ್ಪೆಷಲ್ ಬಸ್ಸು ಮಾಡಿಕೊಂಡು ಬಂದಿದ್ದರು. ಸೆಂಟ್ ಲೂ ಯಿಸ್‌ನ **ಸ್ಟ್ಯಾಟ್ಲರ್** ಹೋಟ್ಲಿನಲ್ಲಿ **೧೨೧೬** ನೇ ನಂಬರಿನ ಕೊಠಡಿ ಯಲ್ಲಿ ಪತ್ರಿಕಾ ಸಂದರ್ಶನ ನಡೆಯಿತು. ನಾವೂ ಆಹ್ವಾನಿತರಾಗಿದ್ದೆವು. ವಾಲೇಸ್ ಆಗತಾನೆ ಪಾಲೆಸ್ಟೈನಿಗೆ ಹೋಗಿ ಬಂದಿದ್ದರು. ಆ ದೇಶಕ್ಕೆ ಸಂಬಂಧಪಟ್ಟಂತೆ ಪ್ರಶ್ನೋತ್ತರ ಪ್ರಾರಂಭವಾಯಿತು. ನನ್ನ ಗಾಂಧೀ ಟೋಪಿಯನ್ನು ನೋಡಿ, ‘ Here is a man from Gandhi's Country ’ ಎಂದು ಉದ್ಗಾರ ತೆಗೆದರು. ಗಾಂಧೀಜಿಯವರು ಪ್ರಪಂಚದ ಶಾಂತಿಗೆ ಇತ್ತ ಪರಿಹಾರಗಳ ಬಗ್ಗೆ ನೀವು ಗಾಂಧೀ ಸಾಹಿತ್ಯ ಓದಿದ್ದೀರಾ ಎಂದು ಕೇಳಿದ್ದಕ್ಕೆ, ಗಾಂಧೀಜಿಯ ಬಗ್ಗೆ ತನಗೆ ವಿಶೇಷ ವಾದ ಗೌರವವಿರುವುದಾಗಿಯೂ ಆದರೆ ಅವರ ತತ್ವಗಳನ್ನು ತಾವು ಅಭ್ಯಾಸ ಮಾಡಿಲ್ಲವೆಂದೂ ತಿಳಿಸಿದರು. ಹಿಂಸೆಯನ್ನು ತೊಡೆದುಹಾಕು ವುದು ಅಹಿಂಸೆಯಿಂದ ಸಾಧ್ಯ ಎಂದು ಗಾಂಧೀಜಿ ಹೇಳಿದ್ದಾರಲ್ಲಾ, ಅದರ ಬಗ್ಗೆ ತಮ್ಮ ಪ್ರತಿಕ್ರಿಯೆ ಏನು ಎಂದು ಕೇಳಿದ್ದಕ್ಕೆ, ಅದನ್ನು ನಾ ಒಪ್ಪ ಲಾರೆ ಎಂದುಬಿಟ್ಟರು.

ವಾಲೇಸ್ ತನ್ನ ಪಕ್ಷಕ್ಕೆ ಜನ ಕಟ್ಟುತ್ತಿದ್ದಾನೆ. ಈತನ ಚಲನ ವಲನಗಳನ್ನು ನೋಡಿ, ವಿರುದ್ಧ ಪಕ್ಷದವರು ಈತನನ್ನು **Fellow traveller** ಎನ್ನುತ್ತಾರೆ. ಆ ಸಂಜೆ ಸೆಂಟ್ ಲೂಯಿಸ್‌ನ ನಗರ ಭವನದಲ್ಲಿ ಒಂದು ಬಹಿರಂಗ ಸಭೆ ಸೇರಿತ್ತು. ವಾಲೇಸ್ ಮಾತನಾಡಿದ. ೭೦,೦೦೦ ಜನ ಸೇರಿದ್ದರು. ಆತನ ಭಾಷಣಾನಂತರ ಅವನ ಪಕ್ಷದ ಕೆಲಸಕ್ಕೆ ಅಲ್ಲಿ ನೆರದಿದ್ದ ಜನ ೧೦,೦೦೦ ಡಾಲರು ಕೂಡಿಸಿಕೊಟ್ಟರು. ಚೆನ್ನಾಗಿ ಮಾತನಾಡಿದ.

ಡಿಸೆಂಬರಿನಲ್ಲಿ ಅಮೇರಿಕೆಯ ರಾಜಧಾನಿಯಾದ ವಾಷಿಂಗ್ಟನ್ ನಗರಕ್ಕೆ ಹೋಗಲಿದ್ದೇನೆ. ಅಲ್ಲಿ **ಅಧ್ಯಕ್ಷ ಟ್ರೂಮನ್** ರವರನ್ನು ನೋಡುವ ಅವಕಾಶ ಸಿಕ್ಕಿದೆ. ಜನವರಿಯಲ್ಲಿ ಪ್ರಿನ್ಸ್‌ಟನ್‌ನಲ್ಲಿ **ಪ್ರೊ||** **ಐನ್‌ಸ್ಟೈನ್** ರವರನ್ನು ನೋಡುತ್ತೇನೆ.

ನನ್ನ ಓದು ಚೆನ್ನಾಗಿ ಸಾಗುತ್ತಿದೆ. ಜೀವಕ್ಕೆ **ಈಗ** ಸುಖವಿದೆ. ಓದಲು ಬೇಕಾದಷ್ಟು ಸಾಹಿತ್ಯವಿದೆ.

ಇದೀಗ ಚಳಿ, ಮಂಜು ಪ್ರಾರಂಭ. ನವೆಂಬರ್ ೨೫ಕ್ಕೆ ನಾಳೆ ಇಲ್ಲಿ ದೊಡ್ಡ ಹಬ್ಬ, **Thanks giving Day.** ಪರಮಾತ್ಮ ಒಳ್ಳೆಯ ಬೆಳೆ ಕೊಟ್ಟಿದ್ದಕ್ಕೆ ಇಂದವನಿಗೆ ವಂದನೆ ಅರ್ಪಿಸುತ್ತಾರೆ. ಊಟಕ್ಕೆ ಟರ್ಕಿ ಮಾಡುವುದು ಅಭ್ಯಾಸ. ಭಾರತೀಯ ವಿದ್ಯಾರ್ಥಿಗಳನ್ನು ಇಲ್ಲಿಯ **ಶ್ರೀಮತಿ ಜೆನ್ನಿ ಫ್ಲೇಮಿಂಗ್ಸ್** ರವರು **ಊಟಕ್ಕೆ** ಕರೆದಿದ್ದಾರೆ. ಆಕೆ ಭಾರತದಲ್ಲಿ ೪೦ ವರ್ಷ ಇದ್ದರು. ಭಾರತೀಯ ಆಹಾರವನ್ನೇ ಕೊಡುತ್ತಾರಂತೆ. ಊಟ ಮಾಡಿ ರುಚಿ ಬರೆಯುತ್ತೇನೆ.

ಇತಿ ಹೀಗೆ,

ನಾಕೃಮೂ.

—:o:—

## ಹದಿಮೂರು

ಬೊಂಬಾಯಿ,

೬—೧೨—೪೭.

ಅಣ್ಣ ನಾಡಿಗ,

ನೀನು ಡಿ. ೪ರ ಗಡುವಿಟ್ಟಿದ್ದೆ ನೋಡು, ಅದರಿಂದ ನನಗೆ ಬಹಳ ಭಯವಾಗಿ ಬಿಟ್ಟಿತ್ತು. ಹೇಡಿತನದಿಂದ ಹಿಂದೇಟು ಹಾಕಿ ಮುಷೀಪಿಯಂತೆ ನಿನ್ನ ಕಾಗದಗಳಿಗೆ ಉತ್ತರವೇ ಬರೆಯದೆ ಇದ್ದುಬಿಡೋಣವೇ ಎಂಬ ಕ್ಷುದ್ರ ಯೋಚನೆ ಸಹ ಬಂದುಬಿಟ್ಟಿತ್ತು. ಅಷ್ಟರಲ್ಲಿ ನಿನ್ನ ನ. ೨೪ರ ಕಾಗದ ಬಂತು. ಜನವರಿ ೧ರ ವರೆಗೆ ವೇಳೆಯಿದೆಯೆಂದು ಕೇಳಿ ಧೈರ್ಯವಾಯಿತು.

ನಿನ್ನ ಪ್ರಶ್ನಾವಳಿ ಬಹಳ ಚೆನ್ನಾಗಿದೆ. ಅದನ್ನು ತಯಾರಿಸುವುದರಲ್ಲಿ. ಬಹಳ ವಿವೇಚನೆಯನ್ನು ವೆಚ್ಚಮಾಡಿದ್ದೀ. ದೇಶ ಭಾಷಾ ಪತ್ರಿಕೆ

ಗಳ ಬಗ್ಗೆ ಸುದ್ದಿ ಸಂಗ್ರಹ ಮಾಡಬೇಕಾದರೂ ಈ ಪ್ರಶ್ನಾವಳಿಯ ಮೂಲಕವೇ ಮಾಡಬೇಕಾಗಿ ಬರಬಹುದೆಂದು ನನ್ನ ಊಹೆ.

ನನಗೆ ಕಳುಹಿಸಿರುವ ಪಟ್ಟಿಯನ್ನು ಭರ್ತಿಮಾಡಿ, Indian Express ನ ವಿಷಯಗಳನ್ನು ತಿಳಿಸಿ, ಇನ್ನೊಂದು ವಾರದಲ್ಲಿ ಕಳುಹಿಸುವೆ. ಯಾವಯಾವ ಪುಸ್ತಕ, Pamphlet ಗಳು ಸಿಗುತ್ತವೋ ಅವನ್ನು ಕೇಖರಿಸಿ ಈ ತಿಂಗಳು ೧೫ರೊಳಗೆ Sea Mailನಲ್ಲಿ ಕಳುಹಿಸಿ ಕೊಡುತ್ತೇನೆ. ನಿನಗೆ ಇನ್ನೇನೇನು ಮಾಹಿತಿ ಬೇಕೋ ಒಡನೆ ಬರೆ. ಸವಿಸ್ತಾರವಾಗಿ ತಿಳಿಸುತ್ತೇನೆ. ಕೇಳುವುದಾದರೆ ಇಂಗ್ಲಿಷ್ ಪತ್ರಿಕಾ ಪ್ರಪಂಚವನ್ನು ಮಾತ್ರ ಕುರಿತು ಕೇಳು.

**ಎ. ಡಿ. ಮಣಿಯನ್ನು** ನೋಡಿದ್ದೆಯಾ? ಆತ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ ಸದಸ್ಯ. ಆತ ಇಂಗ್ಲಿಷ್ ಪತ್ರಿಕೆ "ಹಿತವಾದ" ದ (ನಾಗ್ಪುರ) ಸಂಪಾದಕ. ಸಿ. ಪಿ. ಸರಕಾರದ ಪರವಾಗಿ ಅಮೇರಿಕೆಗೆ ಬಂದಿದ್ದ. ಆತನಿಂದ ಬಹಳ ಸಹಾಯವಾದೀತು. A.I.N.E.C. ನಲ್ಲಿ ಆತ ಹಳೆಯ ಹುಲಿ.

ನೀನು ಸಂಜೀವನಿಗೆ ಬರೆದ ಕಾಗದಗಳನ್ನು ಓದಿದೆ. ನನಗೆ ಬರೆದ ಕಾಗದಗಳನ್ನು ಅವನಿಗೂ ತೋರಿಸಿದೆ. ಅವನು ನಿನಗೆ ಬರೆದಿರುವಂತೆ ಆ ೧೬೦೦ ರೂ. ಚೆಕ್ ನ ಕರೆ ಬಹಳ ತಾಪತ್ರಯಕ್ಕಿಟ್ಟುಕೊಂಡಿತು. ಹೀಗಾಗಿ ನಿನಗೆ ನಮ್ಮಿಂದ ಸಹಾಯವಾಗದೆ ಹೋಯಿತು. ನಿನ್ನ ಮೊದಲಿನ ಸಹಿಗೂ ನೀನು ಚೆಕ್ ಮೇಲೆ ಮಾಡಿದ ಸಹಿಗೂ ವ್ಯತ್ಯಾಸವಂತೆ. ಇದೇ ಕಾರಣದಿಂದ ನನ್ನ ಹೆಸರಿಗೆ ಕೊಟ್ಟಿದ್ದ ೧೦೦ ರೂ. ನ ಚೆಕ್ಕನ್ನು ವಾಪಸು ಮಾಡಿಬಿಟ್ಟರು.

ಪತ್ರಿಕೋದ್ಯಮದ ಎಂ.ಎ. ಪದವಿಗೆ ಸಿದ್ಧಗೊಳ್ಳುತ್ತಿದ್ದೀನೆಂದು ಬರೆದಿದ್ದು ಕೇಳಿ ತುಂಬಾ ಸಂತೋಷವಾಯಿತು. ನಮ್ಮ ಭಾರತದ ಬಗ್ಗೆ ಸುಪ್ರಚಾರ ಮಾಡುತ್ತಿರುವುದಕ್ಕಾಗಿ ಅಭಿನಂದನೆಗಳು. ಹಾಗೆಯೇ **ಪರ್ಲ್ ಬಕ್** ಮತ್ತು **ವಾಲೆಸ್**ರನ್ನು ನೋಡಿದ್ದಕ್ಕೂ **ಟ್ರೂಮನ್,**

**ಐನ್‌ಸ್ಟೈನ್** ರನ್ನು ನೋಡಲಿರುವುದಕ್ಕೂ ಅಭಿನಂದನೆಗಳು. ನೀನು ಕಳುಹಿಸಿದ ಜೆ. ಜೆ. ಸಿಂಗ್‌ರ ಪುಸ್ತಕವೂ ಬಂತು. ಆತ ಎಂಥ ಮನುಷ್ಯ ! ಸೆಂಟ್ ಲೂಯಿಸ್‌ಗೆ ಹೋಗಿ ಮಾತಾಡಿ ಬಂದೆಯಾ ?

ನಿನ್ನ ಜತೆಯಲ್ಲಿ ಅಮೇರಿಕನ್ನೊಬ್ಬನನ್ನು ಕರೆತರುವಿಯೆಂದು ಬರೆದಿದ್ದೀ. ಹೆಣ್ಣನ್ನು ಕರೆತರದೆ ಗಂಡನ್ನೇ ಕರೆದುಕೊಂಡು ಬರುತ್ತಿದ್ದೀಯಲ್ಲ ! ನಿಮ್ಮ ತಾಯಿ, ನಮ್ಮ ತಾಯಿ ನಿನಗೆ ಹೇಳಿದ್ದ ಮಾತು ನೆನಪಿನಲ್ಲಿದೆಯೆ ? ಯಾವ ಬಗೆಯ ಭ್ರಮೆ, ಭ್ರಾಂತಿ, ಇಲ್ಲದೆ ಬರುವುದಾದರೆ ನಿನ್ನ ಗೆಳೆಯನಿಗೂ ಒಳ್ಳೆಯದು ನಿನಗೂ ಒಳ್ಳೆಯದು. ಆತ ಮತ್ತೊಬ್ಬ ಕೈಥಾನ್ ಆದರಂತೂ ನಮಗೆಲ್ಲ ಹಿಗ್ಗು. ನೀನು ಮುದ್ರಣ ಯಂತ್ರವನ್ನು ಕೊಳ್ಳಲು ಹದಿ ಹಾಕುತ್ತಿದ್ದೀಯೆಂದು ತಿಳಿಸಿದ್ದೀಯಲ್ಲ, ಬೇಡವೆಂದು ನನ್ನ ಸಲಹೆ. ಯಾವ ಕೆಲಸವನ್ನು ಕೈಗೊಳ್ಳಬೇಕಾದರೂ ಕ್ಷೇತ್ರ ಪರೀಕ್ಷೆ ಮೊದಲು ನಡೆಯಬೇಕು, ಕರ್ನಾಟಕದಲ್ಲಿ ನೀನು ಪತ್ರಿಕೆಯನ್ನು ಆರಂಭ ಮಾಡಬೇಕಾದರೆ ಆ ಯೋಜನೆಯನ್ನು ತಯಾರಿಸಬೇಕಾದ್ದು ಕರ್ನಾಟಕಕ್ಕೆ ಹಿಂತಿರುಗಿದ ಮೇಲೆ ; ಅಲ್ಲಿ ಕುಳಿತುಕೊಂಡಲ್ಲ. ಈಗಲೇ ಯಂತ್ರ ಗಿಂತ್ರವನ್ನು ಕೊಳ್ಳ ಹೋಗುವ ಹುಚ್ಚು ಕೆಲಸಕ್ಕೆ ಕೈಹಚ್ಚಬೇಡ.

" ಕೆಲಸ ಸಾಗಿದೆ, ಜೀವನಕ್ಕೆ ಸುಖವಿದೆ ; ಓದಲು ಬೇಕಾದಷ್ಟು ಸಾಹಿತ್ಯ ; ಈಗೀಗ ಮನಶ್ಶಾಂತಿ ಬರುತ್ತಿದೆ.'' ಎಂದು ಬರೆದಿರುವುದನ್ನು ಓದಿ ಬಹಳ ಸಂತೋಷವಾಯಿತು. ಮನೋದಾರ್ಢ್ಯದಿಂದ ಸುತ್ತುಮುತ್ತಲಿನ ಎಡರುತೊಡರುಗಳನ್ನು ಗೆದ್ದುಕೊಂಡು ವಿಜಯಿಯಾಗಿದ್ದೀ, ಭಲೆ, ಇದೇ ಧೃತಿ ಮುಂದುವರಿಯಲಿ.

ನಿನ್ನ ಚಿತ್ರ ನೋಡಿದರೆ, ನಿನ್ನ ಮೈ ತುಂಬಿಕೊಂಡಂತೆ ಕಾಣುತ್ತದಲ್ಲಯ್ಯ ! ಆರೋಗ್ಯ ಹೇಗಿದೆ ?

ನಮ್ಮ ಮನೆಯಲ್ಲಿ ಎಲ್ಲರೂ ಆರೋಗ್ಯ.

ಹೀಗೆ,

ಶೌರಿ.

## ಹದಿನಾಲ್ಕು

ಕೊಲಂಬಿಯ,

೧೫—೧೨—೪೭.

ಪ್ರಿಯ ಶೌರಿ,

ನನ್ನ ಜೊತೆಯಲ್ಲಿ ಬರುವ ಅಮೇರಿಕನ್ನನ ಹೆಸರು **ರಿಚರ್ಡ್ ಸ್ಮಿತ್** ಎಂದು. ಕಾಲೇಜು ಮೆಟ್ಟಲು ಹತ್ತಿದವನಲ್ಲ. ಆದರೂ ಅನೇಕ ವೃತ್ತಪತ್ರಿಕೆಗಳ ಆಫೀಸಿನಲ್ಲಿ ಕೆಲಸ ಮಾಡಿ ಅನುಭವ ಪಡೆ ದಿದ್ದಾನೆ. ಈತನಿಗೆ ಮೊದಲಿನಿಂದಲೂ ಭಾರತದ ಬಗ್ಗೆ ಆಸಕ್ತಿ ಬಹಳ. ಈಗ ನಾಲ್ಕು ವರ್ಷಗಳ ಹಿಂದೆ, ಸೆಂಟ್ ಲೂಯಿಸ್‌ನಲ್ಲಿ ಭಾರತ ಸಂಘ ಸ್ಥಾಪಿಸಿದ್ದ. ಕೇವಲ ೨೨ ವಯಸ್ಸುಳ್ಳ ಬ್ರಹ್ಮಚಾರಿ. ತಂದೆಗೆ ಒಬ್ಬನೇ ಮಗ. ಈತನ ತಮ್ಮ ಒಬ್ಬನಿದ್ದ. ಹೋದ ವರ್ಷ ಬಂದೂಕು ವರಿಸು ತ್ತಿರುವಾಗ ಅಕಸ್ಮಾತ್ ಗುಂಡು ತಗಲಿ ಪ್ರಾಣ ಬಿಟ್ಟ. ಈತನ ತಂದೆ ತಾಯಿ, ಮಗನ ಕಾರ್ಯಕ್ರಮ ಒಪ್ಪಿದಾರೆ. ನನಗೆ ಈತನ ಭೇಟಿ ಯಾದದ್ದು ನ್ಯೂಯಾರ್ಕಿನಲ್ಲಿ. ಅಂದಿನಿಂದ ನಮಗೆ ಗೆಳೆತನ ಬೆಳೆದಿದೆ. ಹುಡುಗ ಸಾಧು, ಪ್ರಾಮಾಣಿಕ. ಈತನಿಗೆ ನಮ್ಮ ಹಿಂದಿನ ಮಹಾರಾಜ ರಲ್ಲಿ ತುಂಬಾ ಭಕ್ತಿ, ಗೌರವ. ಭಾರತಕ್ಕೆ ಬಂದು ಅಲ್ಲಿಯೇ ಕೆಲಸ ಬೇಕೆಂದು ಆತನ ಇಷ್ಟ.

ನಾ ತರುವ ಮುದ್ರಣಾಲಯದ ಬಗ್ಗೆ ನಿನ್ನ ಸಲಹೆ ತುಂಬಾ ಯೋಗ್ಯವಿದೆ. ಆ ಬಗ್ಗೆ ವಿಚಾರ ಸದ್ಯಕ್ಕೆ ನಿಲ್ಲಿಸುತ್ತೇನೆ. ನನ್ನ ಗುರಿ ಈಗ ಸ್ಪಷ್ಟವಾಗಿದೆ. ಕರ್ನಾಟಕದಲ್ಲಿ ಪತ್ರಿಕೆಯನ್ನು ಹೊರಡಿಸುವ ಯೋಜನೆ ಕಾರ್ಯಗತವಾಗಲೇ ಬೇಕು. ಹುಬ್ಬಳ್ಳಿ, ಬೆಂಗಳೂರು, ದಾವಣಗೆರೆ, ಮೈಸೂರು ಈ ಸ್ಥಳಗಳ ಮೇಲೆ ನನ್ನ ಕಣ್ಣು. ಮುದ್ರಣ ಯಂತ್ರ ಸ್ವಂತವಾಗಿ ಬೇಕೇಬೇಕು. ಆ ಬಗ್ಗೆ ಸಿದ್ಧತೆ ಮಾಡಿ ಬರು ತ್ತೇನೆ. ಅಲ್ಲಿಗೆ ಬಂದ ಮೇಲೆ ಸೂಕ್ತವಾದ ಯಂತ್ರಗಳನ್ನು ಅವಶ್ಯಕ

ಕಂಡುಬಂದರೆ ಕೊಳ್ಳುವುದು. ನಾ ಬರುವಾಗಲೇ ಕೊಂಡುಕೊಂಡು ಬರುವುದಿಲ್ಲ.

ಸಂಜೀವನ ಸಂಸಾರ ಶಾಂತಿಯಿಂದ ಮುಂದುವರಿಯುತ್ತಿರುವುದು ಕೇಳಿ ನನಗೆ ಆನಂದವಾಗಿದೆ. ಆತನ ಮಧುರ ಜೀವನ ಪಾಕವಾದದ್ದು ಕೇಳಿ ಸಂತೋಷ. ಆ ಪಾಕ ಅವರ ಜೀವನದಲ್ಲಿ ಹೊಸ ಅಧ್ಯಾಯ ಪ್ರಾರಂಭಿಸುವ ಸುದಿನ ಬೇಗನೆ ಬರಲಿ.

ನಾ ಮೈ ತುಂಬಿಕೊಂಡಿದ್ದೇನೆ. ಇಲ್ಲಿ ತಿನ್ನಲು ಬೇಕಾದಷ್ಟು ಆಹಾರವಿದೆ. ೧೩೦ರಿಂದ ೧೪೨ ಪೌಂಡು ಭಾರವಾಗಿದ್ದೇನೆ.

ನಾನೀಗ ಇಲ್ಲಿಯ ಭಾರತೀಯ ವಿದ್ಯಾರ್ಥಿ ಸಂಘದ ಕಾರ್ಯ ದರ್ಶಿ. ಮೊನ್ನೆ ಆರಂಭ ಭಾಷಣವಾಯಿತು. ಪ್ರಪಂಚದ ವಿದ್ಯಾರ್ಥಿ ಕಾಂಗ್ರೆಸ್ಸಿನ ಕಾರ್ಯದರ್ಶಿ ಭಾರತೀಯರಾದ ಡಾ|| ಮ್ಯಾಲ್ಕಂ ಅದಿ ಶೇಷಯ್ಯನವರು ನಮ್ಮ ಅತಿಥಿಗಳಾಗಿದ್ದರು. ಜನವರಿಯಲ್ಲಿ ರಾಯ ಭಾರಿ ಅಸಫ್ ಅಲ್ಲಿಗಳು ಇಲ್ಲಿಗೆ ಬರುತ್ತಾರೆ. ನನಗೀಗ ಮೈತುರುಸಿ ಕೊಳ್ಳಲೂ ಬಿಡುವಿಲ್ಲ.

ನಿನ್ನಿಂದ ಬಿಡುವಿದ್ದಾಗ ಮೈಸೂರು ಸತ್ಯಾಗ್ರಹದಲ್ಲಿ ನಿನ್ನ ಪಾತ್ರದ ಬಗ್ಗೆ ವಿವರ ಕಾಗದ ಬರಲಿ.

ಆನಂದರಾಯರು ಈಗ ಎಲ್ಲಿದಾರೆ ? ಶ್ರೀ ವರದರಾಜರು ಅಲ್ಲಿ ಯೇ ಇದ್ದಾರೇನು ? ನನ್ನ ಕಾರ್ಯದರ್ಶಿ ಕಿಟ್ಟಿಯ ಸಂಸಾರ ಹೇಗೆ ಸಾಗಿದೆ ? ಆತನ ಅಣ್ಣ ರಾಜೀನಾಮೆ ಕೊಟ್ಟರಂತೆ ನಿಜವೇ ?

ಸರ್ವೆಂಟ್ಸ್ ಆಫ್ ಇಂಡಿಯಾದ ಸ್ವಾಮಿ ಎಲ್ಲಿ ಈಗ ?

ಇತಿ ನಿನ್ನ,
ನಾಕೃಮೂ.

—:o:—

## ಹದಿನೈದು

ಬೊಂಬಾಯಿ,
೩೦—೧೨—೪೭.

ಅಣ್ಣಾ ನಾಡಿಗ,

ನಿನ್ನ ೧೫ನೆಯ ತಾರೀಖಿನ ಕಾಗದ ಬಂತು. ಚೆಕ್ಕಿನ ವಿಷಯ ಈ ಸಲವೂ ಕೊಂಚ ತಕರಾರಿನಲ್ಲಿದೆ. ಇವತ್ತು ನಾಳೆಯಲ್ಲಿ ತಿಳಿಯು ತ್ತದೆ. ಸರಿಹೋದಲ್ಲಿ ಒಡನೆಯೇ ಕಳುಹಿಸಿಕೊಡುತ್ತೇನೆ. ಇಲ್ಲವಾ ದಲ್ಲಿ ತಿಳಿಸುತ್ತೇನೆ.

ನಿನ್ನ ವ್ಯಾಸದ ವಿಷಯ. ನಿನ್ನ ವಿಭಾಗ ವಿಧಾನ ಸಮಂಜಸ ವಾಗಿದೆ. ಆದರೆ ನೀನು ಪ್ರತಿಪಾದಿಸಲಿರುವ ವಿಷಯ ಕೊಂಚ ಕಷ್ಟವೇ. ಈ ಬಗ್ಗೆ ಇತ್ತೀಚೆಗೆ ಭಾರತದಲ್ಲೂ ಕೊಂಚ ಚರ್ಚೆ ನಡೆಯುತ್ತಿದೆ. ಇಂಗ್ಲೀಷನ್ನು ಕೂಡಲೇ ಕಿತ್ತುಹಾಕುವುದು ಬೇಡವೆಂದು ಅಜಾದ್ ಹೇಳುತ್ತಿದಾರೆ. ಮೊನ್ನೆ ಅಖಿಲ ಭಾರತ ಹಿಂದೀ ಸಾಹಿತ್ಯ ಸಮ್ಮೇಳನ ದಲ್ಲಿ ಹಿಂದಿಯೇ ರಾಷ್ಟ್ರಭಾಷೆಯಾಗಬೇಕೆಂದೂ ನಾಗರೀಲಿಪಿಯನ್ನು ಇಡೀ ಭಾರತವೇ ಒಪ್ಪಿಕೊಳ್ಳಬೇಕೆಂದೂ ಭಾಷಣಗಳಾದುವು. ಅಧ್ಯಕ್ಷ ರಾಗಿದ್ದ ಮಹಾಪಂಡಿತ ರಾಹುಲ ಸಾಂಕೃತ್ಯಾಯನರು (೧೭ ಭಾಷೆ ಗಳ ಉದ್ದಾಮ ಪಂಡಿತರು) ಉರ್ದೂ ಲಿಪಿ ಅಸಂಪೂರ್ಣವಾದುದರಿಂದ ಅದನ್ನು ತಿರಸ್ಕರಿಸಬೇಕೆಂದೂ ರೋಮನ್ ಲಿಪಿಯನ್ನು ಅಂಗೀಕರಿ ಸುವುದು ಸಾಧುವಲ್ಲವೆಂದೂ ಪ್ರತಿಪಾದಿಸಿದರು. ರೋಮನ್ ಲಿಪಿ Unphoenetic, Unscientific. ಭಾರತ ಭಾಷೆಗಳ ವಿವಿಧ ಸ್ವರ ಗಳನ್ನು ತೋರಿಸಿ ಕೊಡಲು ಅದರ ೨೬ ಅಕ್ಷರಗಳಿಗೆ ಸಾಧ್ಯವಿಲ್ಲ. ನಾಗರೀಲಿಪಿ ಪ್ರಪಂಚದ ಎಲ್ಲ ಲಿಪಿಗಳಿಗಿಂತ scientific ಆಗಿದೆ. ಯಾವಸ್ವರ ಯಾವ ಶಬ್ದವನ್ನಾದರೂ ತೋರಿಸಿಕೊಡಬಹುದು. ಇನ್ನೊಂದು ವಾದವುಂಟು. ನಾಗರೀಲಿಪಿ ಟೈಪ್‌ರೈಟರ್‌ಗೂ ಲಿನೋಟೈಪ್‌ಗೂ ಹೊಂದುವುದಿಲ್ಲ. ರೋಮನ್ ಲಿಪಿಯಾದರೆ ಅನು

ಕೂಲ ಎಂದು. ರಾಹುಲ್‌ರು ಈ ವಾದವನ್ನು ತಿರಸ್ಕರಿಸಿದರು. ರೋರ್ಮ ಲಿಪಿಯಲ್ಲಿ ದೊಡ್ಡಕ್ಷರ ( capitals ) ಮತ್ತು ಸಣ್ಣಕ್ಷರ (small letters) ಉಂಟು. ನಾಗರಿಯಲ್ಲಿಲ್ಲ. ಆದ್ದರಿಂದ ಟೈಪ್‌ರೈಟರಿನಲ್ಲಿ ರೋರ್ಮ ಲಿಪಿಗಿಂತ ಹತ್ತೋ ಹನ್ನೆರಡೋ ಮೊಳೆಗಳು ಹೆಚ್ಚಾದೀತು. ಕೀಬೋರ್ಡಿನಲ್ಲಿ ಮಾತ್ರ ಒಂದೂವರೆಯಷ್ಟು ಹೆಚ್ಚು ಮಾತ್ರೆಗಳಿರುತ್ತವೆ. ಟೈಪರೈಟರಿಗೆ ಅನ್ವಯವಾಗುವುದೇ ಲಿನೋಟೈಪ್‌ಗೂ ಅನ್ವಯವಾಗುತ್ತದೆ. ಸಮ್ಮೇಳನದಲ್ಲಿ ಮಾತನಾಡಿದ ಗೋವಿಂದ ವಲ್ಲಭ ಪಂತ್, ರಾಹುಲ, ಕೆ. ಎಂ. ಮುನ್ಷಿ ಮುಂತಾದವರೆಲ್ಲ ನಾಗರೀ ಲಿಪಿಯನ್ನು ಬಂಗಾಳಿ, ಗುಜರಾತಿ, (ಸಾಧ್ಯವಾದರೆ ತಮಿಳು, ಕನ್ನಡ, ತೆಲುಗು, ಮಲೆಯಾಳಂ) ಭಾಷೆಗಳವರೂ ಅನುಸರಿಸಬೇಕೆಂದು ಪ್ರಾರ್ಥಿಸಿದರು. ಗುಜರಾತಿ, ಬಂಗಾಳಿ ಲಿಪಿಗಳಿಗೂ ನಾಗರಿಗೂ ಇರುವ ವ್ಯತ್ಯಾಸ ಬಹಳ ಕಡಿಮೆ. ಮರಾಠೀ ಲಿಪಿ ಈಗಾಗಲೇ ನಾಗರೀಲಿಪಿಯನ್ನೇ ಒಪ್ಪಿಕೊಳ್ಳುವುದರಿಂದ ಅವರಿಗೆ ಪ್ರತಿಕೂಲಗಳೇನೂ ಇಲ್ಲ. ಏಕಲಿಪಿಯ ಅನುಕೂಲಗಳು ಬಹಳ, ಪತ್ರಿಕೋದ್ಯಮಕ್ಕೆ ಭಾರಿಸಹಾಯವಾಗುತ್ತದೆ. ಲಿನೋಟೈಪುಗಳನ್ನು ಹೆಚ್ಚು ಸಂಖ್ಯೆಗಳಲ್ಲಿ ತಯಾರು ಮಾಡಲು ಸಾಧ್ಯವಾಗುತ್ತದೆ. ಕೈಮೊಳೆ ಜೋಡಿಸುವುದು ನಿಂತು ಲಿನೋಟೈಪ್ ಬಳಕೆಗೆ ಬರುವವರೆಗೂ ಪತ್ರಿಕೋದ್ಯಮ ಬೆಳೆಯದು. ಈ ಕಾರಣದಿಂದಲೇ ಉರ್ದು ಲಿಪಿ ಪತ್ರಿಕೋದ್ಯಮಕ್ಕೆ ಸಂಪೂರ್ಣವಾಗಿ ಅಸಮರ್ಪಕ. (ಸಾಧಾರಣವಾಗಿ ಉರ್ದುವನ್ನು ಮೊಳೆಗಳಲ್ಲಿ ಜೋಡಿಸುವುದು ಸಾಧ್ಯವಿಲ್ಲ, ಲಿಥೊ ಮಾಡಬೇಕಾಗುತ್ತದೆ!) ಮರಾಠಿ, ಗುಜರಾತಿ, ಬಂಗಾಳಿ, (ಉರ್ದು ಪೂರ್ವ ಪಂಜಾಬಿನಲ್ಲಿ) ಈ ನಾಲ್ಕು ಸಂಪೂರ್ಣವಾಗಿ ನಾಗರಿಯನ್ನೇ ಅನುಸರಿಸಿದರೆ ಇಂಡಿಯಾದಲ್ಲಿ (ಪಾಕೀಸ್ಥಾನವನ್ನುಳಿದು) ಮೂವತ್ತೂಕಾಲುಕೋಟಿ ಜನ ಒಂದೇ ಲಿಪಿಯನ್ನು ಬರೆಯುವವರಾಗುತ್ತಾರೆ. ಅವರಲ್ಲೀಗ ಕೇವಲ ೧೦ ಶೇಕಡ ಓದುಬರೆಯುವವರಿರಬಹುದು. ಆದರೆ ಜನರ ಜೀವನ ಮಟ್ಟ ಹೆಚ್ಚಿದಂತೆಲ್ಲ, ಅಕ್ಷರತೆ ಹೆಚ್ಚಿದಂತೆಲ್ಲ ಈ ಲಿಪಿಏಕೀಕತೆಯಿಂದ ಪತ್ರಿಕೋದ್ಯಮ

ಬಹಳವಾಗಿ ಬೆಳೆಯುತ್ತದೆ. ನನ್ನ ವಿಷಯ ವಿಭಜನೆಯಲ್ಲಿ ಅಕ್ಷರತೆಯ ಸಮಸ್ಯೆಯನ್ನು ಸೇರಿಸು. ಲಿಪಿ ಒಂದಾಗುವುದರಿಂದ ಪುಸ್ತಕ ಪ್ರಕಟಣೆಗೂ ಅನುಕೂಲ. ಹಾಗೆಯೇ ಅಕ್ಷರತೆಯನ್ನು ಹಬ್ಬುವುದೂ ಸುಲಭ.

ರಾಷ್ಟ್ರೀಯ ಭಾಷೆ ಹಿಂದಿ ಬರುವುದರಿಂದ ಪತ್ರಿಕೋದ್ಯಮಕ್ಕೆ ಏನಾಗುವುದೋ ಹೇಳುವುದು ಕಷ್ಟ. ಒಂದು ಮಾತ್ರ ಹೇಳಬಹುದು. ಯುದ್ಧದ ದೆಸೆಯಿಂದ, ಭಾರತ ಸರ್ಕಾರದ ಪ್ರಸ್ತುತ ಆರ್ಥಿಕ ದೆಸೆಯಿಂದ ಜೀವನ ಮಟ್ಟ ಏರುತ್ತದೆ. ಸುದ್ದಿಗಳ ಮೇಲೆ ಆಸಕ್ತಿ ಹೆಚ್ಚಿದೆ. ಸ್ವಾತಂತ್ರ್ಯ ಬಂದಿರುವುದರಿಂದ ಸರಕಾರಗಳು (ಈಗಿನ ಸಿರಾಶ್ರಿತ Emergency ಮುಗಿದೊಡನೆ) ಅಕ್ಷರತೆಯನ್ನು ಹೆಚ್ಚಿಸಲು ಪ್ರಯತ್ನಿಸುತ್ತಾರೆ. ಅಲ್ಲದೆ ಹಿಂದಿಯನ್ನು ರಾಷ್ಟ್ರಭಾಷೆ ಮಾಡುವುದರಿಂದ ( ಭಾರತದ ಸ್ಟಾಂಪುಗಳ ಮೇಲೆ ಸಹಿತ ಹಿಂದಿ ಲಿಪಿಯಲ್ಲಿ ಜೈಹಿಂದ್ ಹಾಕಿದ್ದಾರೆ, ಕಂಡೆಯಾ !) ಕ್ರಮೇಣ ಇಂಗ್ಲಿಷು ಕಣ್ಮರೆಯಾಗುತ್ತದೆ. ಆದ್ದರಿಂದ ಹಿಂದೀ ಪತ್ರಿಕೋದ್ಯಮ ಬಹಳವಾಗಿ ಬೆಳೆಯುತ್ತದೆ. ಬೇಕಾಗುವುದೊಂದೇ ಲಿನೋಟೈಪ್. ಈಗ ಸಹ ಬಂಗಾಳೀ, ತಮಿಳು, ಮಿಕ್ಕಭಾಷೆಗಳಲ್ಲಿ ಲಿನೋಗಳಿವೆ. (ಕನ್ನಡದಲ್ಲಿ ಅನಂತಸುಬ್ಬರಾಯರ ಟೈಪ್ ರೈಟರ್ ಇದ್ದ ಹಾಗೆ) ಬಂಗಾಳಿ ಹೊರತು ಬೇರೆ ಯಾರೂ ಉಪಯೋಗಿಸುತ್ತಿಲ್ಲ ; ರಾಷ್ಟ್ರಭಾಷೆ ಹೇಗಾದರೂ ಆಗಲಿ, ದೇಶಭಾಷೆಗಳ ಪತ್ರಿಕೋದ್ಯಮವಂತೂ ಚೆನ್ನಾಗಿ ಬೆಳೆಯುತ್ತದೆ. ಹಿಂದಿಗೂ ದೇಶಭಾಷೆಗಳಿಗೂ ತಿಕ್ಕಾಟ ಘರ್ಷಣೆಗಳು ಬರುತ್ತವೋ ಎಂಬುದು ಬಹಳ ಚತುರ ಪ್ರಶ್ನೆ. ಈಗಲೇ ಹೇಳಲು ಸಾಧ್ಯವಿಲ್ಲ. ಇಂಗ್ಲಿಷ್ ಜರ್ನಲಿಸಂಗೆ ಇನ್ನು ಭಾರತದಲ್ಲಿ ಭವಿಷ್ಯವಿಲ್ಲ. ಈಗಾಗಲೇ ಇರುವ ಪತ್ರಿಕೆಗಳ ಪ್ರಸಾರ (circulation) ಇಳಿಯುತ್ತಿದೆ. ಅದರಲ್ಲೂ ಉತ್ತರಭಾರತದಲ್ಲಿ. ಹೊಸದಾಗಿ ಆರಂಭಿಸಿದ ಇಂಗ್ಲಿಷ್ ದಿನಪತ್ರಿಕೆಗಳು ಒಂದೆರಡು ತಿಂಗಳಲ್ಲಿ ಮುಚ್ಚಿ ಹೋಗುತ್ತಿವೆ. ಉದಾ : ಮದ್ರಾಸಿನಲ್ಲಿ " ನ್ಯೂಟೈಮ್ಸ್", ಬೊಂಬಾಯಲ್ಲಿ " ಅಡ್ವೋಕೇಟ್ ಇಂಡಿಯಾ " ; ಇನ್ನು ಮೇಲೆ ಹಿಂದಿಯಲ್ಲಿ

ದೇಶಭಾಷೆಗಳಲ್ಲಿ ಪ್ರಚಲಿತ ವಿಷಯಗಳನ್ನು ಕುರಿತು ಲೇಖನ, ಪುಸ್ತಕಗಳು ಬರುತ್ತವೆ. **Hindi will slowly replace English as the common language of Indian Intellectuals.** ಆದ್ದರಿಂದ ಗಾತ್ರದಲ್ಲಿ, ದರ್ಜೆಯಲ್ಲಿ, ಮಟ್ಟದಲ್ಲಿ, ವೈವಿಧ್ಯದಲ್ಲಿ, ಭಾರತದಲ್ಲಿ ಪತ್ರಿಕೋದ್ಯಮ ಬೆಳೆಯುತ್ತದೆ. ಇನ್ನೊಂದು: ಈವರೆಗೆ ಪತ್ರಿಕೆಗಳು ನೂರಾರು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದವು. ಸದಾ ರಾಜಕೀಯದ ಬಗ್ಗೆ ಯೋಚಿಸಬೇಕಾಗುತ್ತಿತ್ತು. ಯಾರೋ ಹೇಳಿದ್ದಾರಂತೆ: **A subject people have no Politics ಎಂದು.** ವಾಸ್ತವವಾಗಿ ನೋಡಿದರೆ **All is Politics for a subject Nation.** ಇನ್ನು ಮೇಲೆ ಸಂಸ್ಕೃತಿ, ಕಲೆ, ವಿರಾಮದ ಹವ್ಯಾಸಗಳು, ಇವೆಲ್ಲಕ್ಕೂ ನಾವು ಗಮನ ಕೊಡಬಹುದು. ಕಾಗದದ ಪರಿಸ್ಥಿತಿ ಉತ್ತಮಗೊಂಡಲ್ಲಿ (ಈಗಾಗಲೇ ಭಾರತದಲ್ಲೇ ಪತ್ರಿಕೆಯ ಕಾಗದ (News Print) ತಯಾರಿಸಲು ಎರಡು ಪ್ರಯತ್ನ ನಡೆಯುತ್ತಿವೆ. ಸಿ. ಪಿ. ಯಲ್ಲಿ ಮೂರು ಕೋಟಿ ರೂ. ಬೆಲೆಯ ಕಾರ್ಖಾನೆ ಏಳಲಿದೆ. ಮೈಸೂರು ಕಾರ್ಖಾನೆಯಲ್ಲಿ ನ್ಯೂಸ್ ಪ್ರಿಂಟ್ ತಯಾರಿಸಲಿದ್ದಾರೆ.) ಕ್ಷಿಪ್ರದಲ್ಲೇ ಸಾವಿರಾರು ಮಾಸಿಕ ಪಾಕ್ಷಿಕ ವಾರಪತ್ರಿಕೆಗಳು, ನೂರಾರು ದೈನಿಕಗಳು ಹುಟ್ಟಿಕೊಳ್ಳುತ್ತವೆ.

ನಿನ್ನ ವಿಷಯ ವಿಭಜನೆಯಲ್ಲಿ ಅಕ್ಷರತೆ, ಕಾಗದದ ತಯಾರಿಕೆ, ಸುದ್ದಿಸಂಸ್ಥೆಗಳು ಮೂರನ್ನೂ ಸೇರಿಸಬೇಕಾಗುತ್ತದೆ. ತಂತಿ, ಟೆಲಿಪ್ರಿಂಟರ್ ಶೀಘ್ರಲಿಪಿಗಳಿಗಂತೂ ಇನ್ನೂ ಅನೇಕ ವರ್ಷ ಇಂಗ್ಲಿಷ್ ನಿಂತೇ ನಿಲ್ಲುತ್ತದೆ. ಭಾಷೆಯಿಲ್ಲದಿದ್ದರೂ ಲಿಪಿ ನಿಲ್ಲುತ್ತದೆ. ಈ ಮೂರು ಶಾಖೆಗಳಲ್ಲೂ ರೋಮನ್ ಲಿಪಿ ಉಪಯೋಗಿಸಿಕೊಂಡು ಹಿಂದೀಮಾತು ಬರೆಸಬಹುದು. ಭಾರತೀಯ ಸೈನ್ಯದಲ್ಲಿನ ರೋಮನ್ ಉರ್ದು ಇದ್ದಂತೆ.

ಹೀಗೆ,

ಶಾಂ.

—:o:—

## ನಮ್ಮ ಕಾಗದಗಳು

ಬೊಂಬಾಯಿ,
೧೦-೧-೪೮

ಅಣ್ಣ ನಾಡಿಗ,

ಈ ವರ್ಷದಲ್ಲಿ ಬರೆಯುತ್ತಿರುವುದು ಇದೇ ಮೊದಲನೆಯ ಕಾಗದ, ಈ ಇಸವಿ ಕಳೆಯುವುದರ ಒಳಗೆ ಮತ್ತೆ ನೀ ಭರತಭೂಮಿಯಲ್ಲಿರುತ್ತೀಯೆಂದು ನನ್ನ ಭರವಸೆ. ದಾಸ್ಯದ ನಾಡನ್ನು ಬಿಟ್ಹೋಡಿದ್ದೆ. ಸ್ವತಂತ್ರ ನಾಡಿಗೆ ಹಿಂತಿರುಗುತ್ತೀ.

ಹೋದ ತಿಂಗಳು ಕೊನೆಯ ವಾರದಲ್ಲಿ ನಾ ಬರೆದಿದ್ದ ಕಾಗದ ತಲುಪಿರಬೇಕು. ನನ್ನ ವತಿಯಿಂದ ನಿನಗೆ ಬೇಕಾದಷ್ಟು ಮಾಹಿತಿ ದೊರೆತಿರಬೇಕು. ಅಥವಾ ಸಾಲದೋ? ನಿನ್ನ ಡಿ. ೧೫ ರ ಕಾಗದಕ್ಕೆ ಆ ಕಾಗದದಲ್ಲೇ ಉತ್ತರ ಬರೆದಾಗಿಹೋಯಿತು.

ನಿನ್ನೆಯ ದಿನ ನಿನಗೆ ೧೬೦೦ ರೂ. ಗಳನ್ನು ಕಳುಹಿಸುವ ಏರ್ಪಾಡು ಮಾಡಿದೆ ಕೊನೆಗೂ. ಸುಮಾರು ೧೫ ದಿನಗಳ ತಡವಾಯಿತು. ಏನೇನೋ ತಕರಾರು. ನ್ಯೂಯಾರ್ಕಿನಿಂದ ಕಳುಹಿಸಿದ ಚೆಕ್ಕಿಗೆ ವಿದೇಶಿ ಚೆಕ್ಕಾದ ಕಾರಣ ಕ್ಲಿಯರಿಂಗ್ ಬ್ಯಾಂಕಿನ ಅನುಮತಿ ಪಡೆಯಬೇಕೆಂದು ಮೈಸೂರು ಬ್ಯಾಂಕಿನವರು ಹಠಹಿಡಿದರು. ಎಲ್ಲವೂ ಇತ್ಯರ್ಥವಾದ ಮೇಲೆ ಅಮೆರಿಕನ್ ಎಕ್ಸ್‌ಪ್ರೆಸ್‌ಗೆ ಹಣವನ್ನು ತೆಗೆದುಕೊಂಡು ಹೋದೆ. ಅವರು ಬಹಳ ವಿನಯದಿಂದ ಕಾರ್ಯ ನಡೆಸಿಕೊಟ್ಟರು. ನಿನಗೆ ೪೭೭.೮೦ ಡಾಲರು ಕಳುಹಿಸುವರಂತೆ. ಈ ಕಾಗದ ತಲುಪುವ ವೇಳೆಗೆ ಹಣವೂ ನಿನಗೆ ತಲುಪಿರಬೇಕು.

ಅಮೇರಿಕನ್ ಎಕ್ಸ್‌ಪ್ರೆಸ್‌ನವರು ಇನ್ನೊಂದು ಮಾತು ಹೇಳಿದರು. ಈ ಸಲವಲ್ಲದೆ ಮುಂದಿನ ಸಲ ದುಡ್ಡೇನಾದರೂ ಬೇಕಾದಲ್ಲಿ (೧) ನೀನಿನ್ನೂ ಅಮೆರಿಕೆಯಲ್ಲಿ ಎಷ್ಟುಕಾಲವಿರುತ್ತೀಯೆಂಬುದನ್ನು ತಿಳಿಸುವುದಲ್ಲದೆ (೨) ನಿಮ್ಮ ಕಾಲೇಜಿನಿಂದ 'Certificate' ಕಳುಹಿಸಬೇಕಂತೆ.

**Reserve bank** ನವರು ಹಾಗೆಂದು ಬರೆದಿರುವುದನ್ನು ನಾನೇ ನೋಡಿದೆ. ಹಾಗೆಂದರೆ ನಿನ್ನ **Dollar Credit** ಮುಗಿದು ಹೋಗಿರಬೇಕೆಂದು ಅರ್ಥ.

ಇನ್ನೇನು ಸಮಾಚಾರಗಳು? ರಿಚರ್ಡ್ ಸ್ಮಿತ್ ನ ವಿಷಯ ನೀ ವಿವರಿಸಿದ್ದನ್ನೋದಿ ಬಹಳ ಸಂತೋಷವಾಯಿತು. ಭಾರತಿಯಾತನಿಗೆ ಸಾಕು ತಾಯಾಗಲಿ. ಕಳೆದ ತಿಂಗಳ ಕೊನೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನ ಕಾಸರಗೋಡಿನಲ್ಲಿ ನೆರವೇರಿತು. ಶ್ರೀ. ತಿ. ತಾ. ಶರ್ಮರು ಅಧ್ಯಕ್ಷತೆ ವಹಿಸಿದ್ದರು.

ಶ್ರೀ. ಟಿ. ಸಿದ್ದಲಿಂಗಯ್ಯನವರೀಗ ಮೈಸೂರು ಕಾಂಗ್ರೆಸ್ ಅಧ್ಯಕ್ಷರು.

ನಿನ್ನವ,
ಶೌರಿ.

—:o:—

## ಹದಿನಾರು

ಕೊಲಂಬಿಯ
೩೧-೧-೪೮

ಪ್ರಿಯ ಶೌರಿ : ಸಂಜೀವ :

ಬಾಪು ತೀರಿ ಹೋದರೆಂದು ರೇಡಿಯೋ ಸುದ್ದಿ ಸಾರಿದ ಘಳಿಗೆಯಿಂದ ನಾವೆಲ್ಲ ಇಲ್ಲಿ ಮೂಕರಾಗಿಬಿಟ್ಟದ್ದೇವೆ. ಹಿಂದೆ ಹಿರೋಷಿಮಾ, ನಾಗಸಾಕಿ ನಗರಗಳಮೇಲೆ ಅಣುಬಾಂಬು ಹಾಕಿದಂದಿನಿಂದ ಇಂತಹ ಸುದ್ದಿ ಪ್ರಪಂಚದಲ್ಲಿ ಬಂದಿರಲಿಲ್ಲ. ನಿನ್ನೆ ಬೆಳಿಗ್ಗೆ ನಾವದನ್ನು ಕೇಳಿದೆವು. ಪ್ರಪಂಚವೆಲ್ಲವೂ ಈ ದುಃಖಕರವಾದ ಸಮಾಚಾರವನ್ನು ಕೇಳಿ ದಿಙ್ಮೂಢವಾಯಿತು. ನಿಮಗೆ ಶುಕ್ರವಾರ ಸಂಜೆ ೫ ಘಂಟೆ, ನಮಗೆ ಶುಕ್ರವಾರ ಬೆಳಿಗ್ಗೆ ೫ ಘಂಟೆಗೆ. ಪರೀಕ್ಷೆಗೆಂದು ಓದುತ್ತಿದ್ದ ಗೆಳತಿ

ಯೋರ್ವರು ರೇಡಿಯೋ ಬಳಿಗೆ ತಿರುಗಿಸುತ್ತಿದ್ದಾಗ ಕೇಳಿದ ಈ ಘೋರ ಸುದ್ದಿಯನ್ನು ನಮಗೆ ಟೆಲಿಫೋನಿನ ಮೂಲಕ ತಿಳಿಸಿದಾಗ ನಾವು ಅದನ್ನು ನಂಬಲಾರದೆ ಹೋದೆವು. ಕೊನೆಗೆ ನಾವೂ ರೇಡಿಯೋ ತಿರುಗಿಸಿದೆವು. ಯಾವ ಮಿಾಟರಿಗೆ ಮುಳ್ಳು ತಿರುಗಿಸಿದರೂ, ಎಲ್ಲಾ ಕೇಂದ್ರಗಳಿಂದಲೂ ಬರೀ ಗಾಂಧಿಜೀ ಮರಣದ ಬಗ್ಗೆಯೇ ಸುದ್ದಿ ಇತ್ತು.

ಪ್ರಪಂಚದಲ್ಲಿ ಪ್ರಕಾಶಿಸುತ್ತಿದ್ದ ಒಂದೇ ಬೆಳಕು ನಂದಿಹೋಯಿತು. ಇನ್ನೊಬ್ಬ ಮಹಾತ್ಮ, ಗಾಂಧಿ, ಈ ತಲೆಮಾರಿನಲ್ಲಿ ಜನಿಸಲಿಕ್ಕಿಲ್ಲ. ಈ ಶ್ರೇಷ್ಠರತ್ನವನ್ನು ಕಾಯ್ದು ಕೊಳ್ಳಲಾರದೆ ಹೋದೆವಲ್ಲ! ನಾವೀಗ ಅಮೇರಿಕದ ಜನತೆಯ ಮುಂದೆ ಮುಖ ತೋರಿಸುವಂತಿಲ್ಲ. ಎಲ್ಲರೂ ಕೇಳುವವರೇ. " Hey ! Why did your own people kill Gandhi? He was a good fellow " ಎಂದು. ನಾಚಿಕೆಯಿಂದ ತಲೆ ತಗ್ಗಿಸುವ ಪ್ರಸಂಗ ಬಂದಿದೆ. ನಾವು ಹೇಳಬಹುದು. **"They killed Gandhi for the same reasons as they murdered their President, Abraham Lincoln."** ಆದರೆ ಅದು ಉತ್ತರವೇ ? ಭಾರತೀಯರಾದ ನಾವು ಕೊಡುವಂಥ ಹುದಲ್ಲ.

ಬರ್ನಾರ್ಡ್ ಷಾ ನಿನ್ನೆ ಗಾಂಧೀಜಿಯ ನಿಧನದ ಬಗ್ಗೆ ಹೇಳುತ್ತಾ **" It is dangerous to be too good in this world "** ಎಂದ ರಂತೆ. ಒಂದೊಂದು ಸಲ ಅದು ನಿಜವೇನೋ ಅನ್ನಿಸುತ್ತದೆ. ಈ ಕ್ರೂರ ಕೃತ್ಯದಿಂದ ಮಾನವೀಯತೆ ತನ್ನ ಮಾಧುರ್ಯವನ್ನೇ ಕಳೆದು ಕೊಂಡಂತೆ ಕಾಣುತ್ತದೆ. ಆದರೆ ಗಾಂಧೀಜಿ ತಮ್ಮ ಭೌತಿಕದೇಹವನ್ನು ತ್ಯಜಿಸಿರುವರೇ ವಿನಾ, ಅವರ ಸತ್ಯ ಜೀವನ, ಸರಳ ತತ್ವಗಳು, ಭಾರತದ ಧೂಳಿನ ಪ್ರತಿಯೊಂದು ಕಣದಲ್ಲಿಯೂ ನಂದಾದೀಪದಂತೆ ಪ್ರಜ್ವಲಿಸು

ತ್ತವೆ. ಭಾರತದ ಜನತೆ ಗಾಂಧೀಜಿಯನ್ನು ಅನುಸರಿಸಿ ನಡೆಯಬೇಕು ಅಷ್ಟೆ. ಪ್ರಪಂಚ ಇರುವ ವರೆಗೂ ಗಾಂಧೀಜಿಯ ತಾರಕ ಮಂತ್ರ,

**ರಘುಪತಿ ರಾಘವ ರಾಜಾರಾಮ**
**ಪತಿತ ಪಾವನ ಸೀತಾರಾಮ**
**ಈಶ್ವರ ಅಲ್ಲಾ ತೇರೇ ನಾಮ**
**ಸಬಕೊ ಸನ್ಮತಿ ದೇ ಭಗವಾನ್**

ಧ್ವನಿಸಿಗೊಳ್ಳುತ್ತಿರುತ್ತದೆ.

**ಶಾಂತ ಮೂರ್ತಿ ಗಾಂಧೀಜಿಗೆ ನಮೋ !**

ಗಾಂಧೀಜಿಯನ್ನು ಹತ್ತಿರದಲ್ಲಿ ನೋಡಿ, ಮಾತನಾಡಿಸಿದ ಪುಣ್ಯ ನನ್ನದು. ಆಶ್ರಮದಲ್ಲೇ ಕೆಲಕಾಲ ಇದ್ದುದು ನೆನಪಿಗೆ ಬಂದು 'ಅಯ್ಯೋ ! ಬಾಪು ತೀರಿಕೊಂಡರೆ' ಅನ್ನಿಸುತ್ತದೆ. ಅಮೇರಿಕೆಗೆ ಬರುವಾಗ ಹರಸಿ ಕಳುಹಿಸಿದ್ದರು. ಭಾರತಕ್ಕೆ ಬಂದು ವರದಿಯನ್ನು ಒಪ್ಪಿಸೋಣವೆಂದಿದ್ದೆ. ನಮಗಿನ್ನೆಲ್ಲಿಯ ಬಾಪು.

**ಮಹಾತ್ಮಾ ಗಾಂಧಿ ಅಮರ್ ಹೋಗಯೇ.**

ಇತಿ ಹೀಗೆ,

ನಾಕೃಮೂ.

—:o:—

## ಹದಿನೇಳು

ಕೃಷ್ಣಕುಂಜ,
೩೧—೧—೪೮.

ಕೃಷ್ಣ,

ನಿನ್ನೆ ಸಂಜೆ ೫-೩೦ ಗೆ ಟೆಲಿಫೋನಿನಲ್ಲಿ ಸಮಾಚಾರ ಬಂತು. "ಗಾಂಧೀಜಿಯವರು ಸಾಯಂಕಾಲದ ಪ್ರಾರ್ಥನೆಗಾಗಿ ಹೊರಗೆ ಬಂದಾಗ, ಯಾರೋ ದುರಾತ್ಮರು ಅವರ ಮೇಲೆ ಮೂರು ಗುಂಡು ಹಾರಿಸಿ

ದರು. ಬದುಕುವ ಆಶೆ ಕಮ್ಮಿ" ಎಂದು. ಐದು ನಿಮಿಷಗಳ ನಂತರ "ಗಾಂಧೀಜಿಯವರು ತೀರಿಹೋದರು" ಎಂಬ ಸುದ್ದಿಯನ್ನು ಕೇಳಿದೆವು. ಬೆಳಗಿನ ಜಾವದ ಪತ್ರಿಕೆಗಳಲ್ಲಿ ವಿವರಗಳು ಬಂದುವು. ಗುಂಡು ಹೊಡೆದವನು ನಾಥುರಾಮ್ ಗೋಡ್ಸೆ ಎಂಬ ಮರಾಠಾ ಯುವಕನಂತೆ. ಹಿಂದೂ ಮಹಾಸಭೆಯ ಉಗ್ರಪಕ್ಷಕ್ಕೆ ಸೇರಿದವನಂತೆ. ಸಾವರ್ಕರರ ಕಾರ್ಯದರ್ಶಿಯಾಗಿದ್ದು ಈಗ ಪೂನಾದಲ್ಲಿ ಮರಾಠಿ ಪತ್ರಿಕೆಯೊಂದರ ಸಂಪಾದಕ. ಗಾಂಧೀಜಿ ದೆಹಲಿಯಲ್ಲಿ ಮುಸಲ್ಮಾನರ ಮೇಲೆ ಅತ್ಯಾಚಾರವನ್ನು ನಿಲ್ಲಿಸುವುದಕ್ಕಾಗಿ ಉಪವಾಸಮಾಡಿದಾಗಿನಿಂದ ಹಿಂದೂ ಮಹಾಸಭೆಯವರು ಉಗ್ರತಮರಾಗುತ್ತಿದ್ದಾರೆ. ಅವರ ಕೋಪವು ಈ ಅತ್ಯಾಚಾರದಲ್ಲಿ ಕೊನೆಗಂಡಿತು. ಅದು ಇಷ್ಟರಲ್ಲಿಯೇ ಮುಕ್ತಾಯವಾಗುವ ಹಾಗೆ ಕಾಣುವುದಿಲ್ಲ.

ಅಂತೂ ಗಾಢಾಂಧಕಾರದಲ್ಲಿ ಬೆಳಗುತ್ತಿದ್ದ ಒಂದೇ ಒಂದು ದೀವಿಗೆ ನಂದಿಹೋಯಿತು. ಸಾಕ್ರೆಟೀಸ್, ಕ್ರಿಸ್ತ, ಲಿಂಕನ್ ಇವರಂತೆಯೇ ಈ ಮಹಾತ್ಮನೂ ತಾನು ಯಾರನ್ನು ಉದ್ಧಾರಮಾಡಲೆತ್ನಿಸಿದನೋ, ಅವರಿಂದಲೇ ಹತನಾದನು. ಈ ದಿನ ಸಂಜೆಗೆ ದಹನ ಕಾರ್ಯಗಳು ದಿಲ್ಲಿಯಲ್ಲಿ ಯಮುನಾ ನದಿಯ ತೀರದಲ್ಲಿ ನಡೆಯುವುವು. ಶಾಂತ ಮೂರ್ತಿಯ ದೇಹವು ತೇಜಸ್ವಿಯಾದ ಅಗ್ನಿಯಲ್ಲಿ ಐಕ್ಯವಾಗುವುದು. ಈ ಆಹುತಿಯ ನಂತರವಾದರೂ, ದೌರ್ಜನ್ಯವು ತಲೆ ತಗ್ಗಿಸುವುದೋ ಇಲ್ಲವೋ ನೋಡಬೇಕು.

ಕೃಷ್ಣ, ಬಾಪೂವಿನ ಸಾನ್ನಿಧ್ಯದಲ್ಲಿ ಕೆಲವು ಕಾಲ ಸೇವೆ ಮಾಡಿದ್ದ ಪುಣ್ಯ ನಿನ್ನದು. ನಿನ್ನ ದುಃಖ ಈಗ ಎಷ್ಟಿರಬಹುದೆಂದು ನಾನು ಯೋಚಿಸ ಬಲ್ಲೆ. ನಿನಗೆ ಯಾರು ಹೇಗೆ ಸಮಾಧಾನ ಹೇಳುವರು? ಪರದೇಶದಲ್ಲಿ ಈ ಕೆಟ್ಟ ಸುದ್ದಿಯನ್ನು ಕೇಳಿ ನೀನೆಷ್ಟು ನೊಂದಿರಬೇಕು. ಧೈರ್ಯದಿಂದ ಸಮಾಧಾನ ತಂದುಕೋ. ಗಾಂಧೀಜಿಗೆ ಸಾವು ಇಲ್ಲ. ನಮ್ಮ ಮೋಹಕ್ಕೆ ಕಾರಣವಾದ ಮೋಹನದಾಸನ ದೇಹ ಮಾತ್ರವೇ ಮರೆಯಾಗಿದೆ ಅಷ್ಟೆ.

ಗ್ರಹಣ ಮುಕ್ತನಾದ ಸೂರ್ಯನಂತೆ ಅವನ ತೇಜಸ್ಸು ಇನ್ನು ನಮ್ಮನ್ನು ಬೆಳಗುವುದು. ಅವನ ದಿವ್ಯ ಶಕ್ತಿಗೆ ಎಲ್ಲಿಯ ಸಾವು. "ಸತ್ತು ಬದುಕಿದ ನವನು." ಯಾವ ಕ್ರೋಧದಿಂದಾಗಿ ಅವನ ದೇಹವು ಬಲಿಯಾಯಿತೋ, ಆ ಕ್ರೋಧವು ಇನ್ನಾದರೂ ನಾಶ ಹೊಂದಲಿ.

ಸಂಜೀವ.

—:o:—

## ಹದಿನೆಂಟು

ಬೊಂಬಾಯಿ,
೨೧—೨—೪೮.

ಅಣ್ಣ ನಾಡಿಗ,

ನಮ್ಮ ನಾಡಿಗೆ ಒದಗಿದ ಮಹಾ ದುರಂತದ ನಂತರ ನಾ ಬರೆಯುತ್ತಿರುವುದು ಇದೇ ಮೊದಲು. ನನ್ನಿಂದ ಈ ಮೊದಲೇ ಕಾಗದ ನಿರೀಕ್ಷಿಸಿದ್ದೆಯೋ ಏನೋ? ನೀನು! ಆದರೆ ಏನೆಂದು ಬರೆಯಲಿ? ಇಂತಹ ಪ್ರಮಾದ ನಡೆದು ಹೋಯಿತೆಂದು ಮನಸ್ಸು ಒಪ್ಪಿಕೊಳ್ಳದೆಯೇ ಹೋಯಿತು. ಇದೆಲ್ಲ ಬರಿಯ ದುಃಸ್ವಪ್ನವಾಗಿರಬೇಕು ಎಂದೆನಿಸುವುದು. ಅಷ್ಟು ನಂಬಲಸಾಧ್ಯವಾದ ಕಾರ್ಯ ನಡೆದೇ ಹೋಯಿತು. ಏನು ಅದೃಷ್ಟ ಹೀನ ದೇಶವೋ ನಾವು! ತಂದೆಯನ್ನೇ ಕೊಂದು ಹುಮ್ಮನ್ನುವ ಮಕ್ಕಳು. ಜಗತ್ತಾಗಲೀ ಚರಿತ್ರೆಯಾಗಲೀ ನಮ್ಮನ್ನು ಮನ್ನಿಸುವುದೆ? ಹಳಿಯಬೇಕಾದ್ದು ಗೋಡ್ಸೆಯನ್ನಲ್ಲ, ನನ್ನನ್ನು, ನಿನ್ನನ್ನು, ನಮ್ಮಂತಹ ಅರೆಮನಸ್ಸಿನ ಉತ್ತರಕುಮಾರರನ್ನು. ನಿಧಿಯನ್ನು ರಕ್ಷಿಸುವ ಗಂಡುತನವಿಲ್ಲದೆ ಹೋಯಿತು ನಮಗೆ.

ಆದರೆ ಒಮ್ಮೊಮ್ಮೆ ತೋರುವುದು ಇದು ಸರಿಯೇನೋ ಎಂದು. ಬಾಳಲ್ಲಿ ಹೇಗೋ ಮರಣದಲ್ಲೂ ಹಾಗೇ. ಅಸಾಮಾನ್ಯನಾದ ಮಹಾನುಭಾವ ತನ್ನ ಮರಣದಿಂದಲೇ ನಮ್ಮ ಬಾಳನ್ನು ಧರ್ಮದ ಹಾದಿಯಲ್ಲಿ ಮುಂದೆ ನಡೆಸಿಕೊಂಡು ಹೋಗುವನೇನೋ?

# ನಮ್ಮ ಕಾಗದಗಳು

ಬಾಪುವಿಲ್ಲದ ಭಾರತ ಏನೇನೋ ಆಗಿಹೋಗಿದೆ. ಆತನ ಧ್ಯೇಯ ಬೋಧನೆಗಳನ್ನು ನಾವು ನಡೆಸಿಕೊಂಡು ಬರುವೆವೋ ಅಥವಾ ಹೇಗೆ ಕೊಲೆಗೇಡಿಗಳಾದೆವೋ ಹಾಗೇ ಕೃತಘ್ನರೂ ಆಗುವೆವೋ!

ನಾಡಿಗ, ಮನಸ್ಸಿನಲ್ಲಿ ಎಷ್ಟೋ ವಿಷಯಗಳಿವೆ. ಹೇಳಬೇಕೆಂದು ಬಾಯಿ ಬಡಿಯುತ್ತಿದೆ. ಆದರೆ ಹೇಳೋಣವೆಂದು ಬಾಯಿ ತೆರೆದರೆ ಏಕೋ ನಾಲಿಗೆಯೇ ಸತ್ತುಹೋಗುತ್ತದೆ. ಮನಸ್ಸು ಶೂನ್ಯವಾಗುತ್ತದೆ. ಅಥವಾ ಕೇವಲ ಅಲ್ಪಾರ್ಥದ ಎಲ್ಲರೂ ಬಿಸಾಡುವ ಒಂದೆರಡು ಸಾಂಪ್ರ ದಾಯಕವಾದ ಮಾತುಗಳು ಮಾತ್ರ ಬರುತ್ತವೆ. ಕ್ಷಮಿಸಿ ಬಿಡು.

ನೀನೆಷ್ಟು ಗೋಳಾಡಿಕೊಂಡಿರುತ್ತೀಯೋ? ನಿನ್ನ ಕಾಗದ ಈ ಘೋರಕೃತ್ಯ ನಡೆದುಹೋದ ಮೂರುದಿನಕ್ಕೆ ತಲುಪಿತು. ಅಕ್ಟೋಬರ್ ಎರಡನೆಯ ತಾರೀಖಿಗೆ ಗಾಂಧೀ ಜಯಂತಿಯ ದಿನದಲ್ಲಿ ಭಾರತದಲ್ಲಿರು ತ್ತೀನೆಂದು ಬರೆದಿದ್ದೀ ನೋಡು— ಅದನ್ನೋದಿದಾಗ ಕಂಠ ಉಬ್ಬರಿಸಿ ಕೊಂಡು ಬಂತು. ನಮ್ಮ ಎಣಿಕೆಗಳೆಲ್ಲ ಎಂಥವು! ನೀನೆಷ್ಟು ಒದ್ದಾ ಡಿರುತ್ತೀಯೋ ಎಂದು ಸಂಜೀವ ಸಹ ಪೇಚಾಡಿಕೊಂಡ.

ನಾಡಿಗ, ಆದರೊಂದು ನಮಗೆ ಸಮಾಧಾನ. ನಮ್ಮ ಜೀವ ಪರ್ಯಂತ ನಾವು ಹೆಮ್ಮೆಯಿಂದ ಹೇಳಿಕೊಳ್ಳಬಹುದು: ಆ ಮಹಾತ್ಮ ನನ್ನು ಕಂಡು ಮಾತಾಡುವ ಭಾಗ್ಯ ನಮಗೆ ದೊರಕಿತ್ತು ಎಂಬುದಾಗಿ. ನಮ್ಮನ್ನು ಕೆಟ್ಟ ಹಾದಿ ತುಳಿಯದಂತೆ, ಅಲ್ಪತನ, ಹೇಡಿತನ, ಲೋಲು ಪತೆ ನಮ್ಮಲ್ಲಿ ಬೆಳೆಯದಂತೆ ನೋಡಿಕೊಳ್ಳಲು ಈ ನೆನಪಿನ ನಂದಾ ದೀವಿಗೆಯನ್ನು ನಾವು ನೆಚ್ಚಿಕೊಳ್ಳಬೇಕು. ಭಾರತದಲ್ಲಿ ಮಹಾ ಅನಾ ಹುತವೇನೋ ಆಗಿಹೋಯಿತಲ್ಲ. ಇನ್ನೂ ಭಾರಿಯ ಪೆಟ್ಟು ಬಿದ್ದು ಬಿಡುತ್ತಿತ್ತು. ಹಂತಕರು ನೆಹ್ರೂ, ಆಜಾದರನ್ನು ಮುಗಿಸಿಬಿಡುವುದರ ಲ್ಲಿದ್ದರು. ಬರ್ಮಾದಲ್ಲಿ ಅಂಗ್‌ಸಾನ್ ಆದರೆ ನಮ್ಮ ಭಾರೀ ದೇಶಕ್ಕೆ ಬರ್ಮಾದ ಸಾವಿರ ಮಡಿಯಷ್ಟು ದೊಡ್ಡ ಅಪಘಾತ.

ನಿನಗೆ ಯೂರೋಪಿಗೆ ಹೋಗಲು ಕಾಲಕ್ಷೇಪ ದೊರೆಯಿತೆಂದು ಕೇಳಿ ಬಹಳ ಸಂತೋಷ. ಆದರೆ ಇಡೀ ಜಗತ್ತಿನ ಸೂತಕದಲ್ಲಿ ಸೇರಿ ಹೋದ ನಾನು ಇಂತಹ ಸಮಯದಲ್ಲಿ ನಿನಗೆ ಅಭಿನಂದನೆಗಳನ್ನು ತಿಳಿಸುವುದೇ ಎಂದು ಸುಮ್ಮನಿದ್ದುಬಿಟ್ಟೆ. ಆ ಕಾಲಕ್ಷೇಪ ನಿನಗಲ್ಲ, ನಿನ್ನ ಧ್ಯೇಯವಾದಿತ್ವಕ್ಕೆ, ಸೇವಾಪರಾಯಣತೆಗೆ ಎಂದು ತಿಳಿ. ನಿನ್ನ ಯೂರೋಪು ಪ್ರವಾಸದಿಂದ ಭಾರತಕ್ಕೆ ಇನಿತಾದರೂ ಸೇವೆಯಾಗುವಂತೆ ನೋಡಿಕೊಳ್ಳುವುದು ನಿನ್ನ ಕರ್ತವ್ಯ. ಎರಡೇ ತಿಂಗಳಲ್ಲಿ ಎಷ್ಟು ಕಲಿಯಲು ಸಾಧ್ಯವಾಗುತ್ತೋ ?

ಟ್ರೂರ್ಮರನ್ನು ನೋಡಿದ್ದು ಸಂತೋಷ. ನಮ್ಮ ತಾಯಿತಮ್ಮ ಕಿಟ್ಟಿ, ಸಿಕ್ಕಿದ್ದನ್ನೆನ್ನು ಹಾಗಾದರೆ.

ದೊಡ್ಡ ಕಾಗದ ಬರೆ— ಅದಕ್ಕುತ್ತರವಾಗಿ ನಾನೂ ದೊಡ್ಡ ಕಾಗದ ಬರೆಯುತ್ತೇನೆ.

ಹೀಗೆ,

ಶೌರಿ.

—:o:—

## ಹತ್ತೊಂಭತ್ತು

ಕೊಲಂಬಿಯ,

೨೯—೨—೪೮.

ಪ್ರಿಯ ಶೌರಿ :

ಗಾಂಧೀಜಿಯ ಮರಣಾನಂತರ ಬರೆದ ನಿನ್ನ ಮತ್ತು ಸಂಜೀವನ ಇಬ್ಬರ ಕಾಗದಗಳೂ ಮುಟ್ಟಿ ನನಗೆ ತುಂಬಾ ವ್ಯಸನವನ್ನುಂಟುಮಾಡಿದವು. ಗಾಂಧೀಜಿಯ ಮೊಮ್ಮಗ ಕಾಂತಿಲಾಲ್ ಗಾಂಧಿ, ಹಿಂದೂಪತ್ರಿಕೆಯಲ್ಲಿ ಬಂದ ವಿವರಗಳ ಪತ್ರಿಕೆಯನ್ನೇ ವಿಮಾನ ಮೂಲಕ ಕಳುಹಿಸಿಕೊಟ್ಟಿದ್ದರು. ಓದುತ್ತಾ ದಳದಳನೆ ನೀರು ಹರಿಯಲಾರಂಭಿಸಿತು.

ಇದೀಗ ವಿಪರೀತ ಛಳಿ ನೋಡು ಇಲ್ಲಿ. ಮಂಜು ಹೇರಳವಾಗಿ ಬಿದ್ದಿರುತ್ತದೆ. ಅಂಥದುರಲ್ಲೇ ಮೊನ್ನೆ ಫೆಬ್ರುವರಿ ೩ ನೇ ತಾರೀಖು ಗಾಂಧೀಜಿಯ ಬಗ್ಗೆ ದುಃಖ ಸೂಚಕ ಸಭೆ ಸೇರಿಸಿದ್ದೆವು. ಭಾರತೀಯ ವಿದ್ಯಾರ್ಥಿ ಸಂಘ, ಅಂತರ ರಾಷ್ಟ್ರೀಯ ಸಂಘ, ಜೊತೆಗೆ ಕೊಲಂಬಿಯಾದ ಸಾರ್ವಜನಿಕರು ಎಲ್ಲರೂ ಸೇರಿ ಈ ಸಭೆಯನ್ನು ಕರೆದಿದ್ದೆವು. ನಮ್ಮ ವಿಶ್ವವಿದ್ಯಾನಿಲಯದ ಉಪಸ್ಥಾನಪತಿಗಳಾದ ಡಾ|| ಥಾಮಸ್ ಎ. ಬ್ರ್ಯಾಡಿಯವರು ಅಧ್ಯಕ್ಷತೆ ವಹಿಸಿ, ಗಾಂಧೀಜಿಯ ಭಾವಚಿತ್ರ ಅನಾವರಣಮಾಡಿದರು. ಗಾಂಧೀಜಿಯ ಭಕ್ತರಾದ ಪ್ರೊ|| ಜೆಸ್ಸಿರೆಂಚರು ಗಾಂಧೀಜಿಯ ಬಗ್ಗೆ ಮಾತನಾಡಿದರು. ಭಾರತೀಯರ ಪರವಾಗಿ ಗಾಂಧೀಜಿಯ ಮೇಲೆ ಚರಮ ಸಂದೇಶ ಓದಿ, ಬಾಪುವಿನ ಬಗ್ಗೆ ಮಾತನಾಡಿದೆ. ಕೊರೆಯುವ ಚಳಿಯನ್ನೂ ಲೆಕ್ಕಿಸದೆ ಬಂದಿದ್ದರಯ್ಯಾ ಇಲ್ಲಿಯ ಜನರು.

ಫೆಬ್ರವರಿ ೧೯ನೇ ತಾರೀಖಿನ ದಿನ ನವದೆಹಲಿಯಿಂದ ನನಗೊಂದು ಲಕ್ಕೋಟಿ ಬಂತು. ನಾನದನ್ನು ನಿರೀಕ್ಷಿಸಿರಲಿಲ್ಲ. ಶ್ರೀ ರಂಗನಾಥ ರಾಮಚಂದ್ರ ದಿವಾಕರರು ಅದನ್ನು ಕಳುಹಿಸಿದ್ದರು. ಆ ಲಕ್ಕೋಟಿ ಸ್ವಲ್ಪ ದಪ್ಪವಾಗಿತ್ತು. ಅದನ್ನು ಒಡೆದೆ, ಕಾಗದವಿತ್ತು. ಕಾಗದವನ್ನು ಇನ್ನೊಂದು ಸಣ್ಣ ಲಕ್ಕೋಟಿಗೆ ಸುತ್ತಿತ್ತು. ಆ ಲಕ್ಕೋಟಿಯಲ್ಲಿ ಭಾರವಾದ ವಸ್ತುವಿತ್ತು. ಒಣಗಿದ ಹೂವಿನ ದಳಗಳು ತೆಳ್ಳನೆ ಲಕ್ಕೋಟಿಯ ಒಳಗಿಂದ ಕಾಣತೊಡಗಿದವು. ಕಾಗದ ಓದುವ ಅವಸರಕ್ಕಿಂತ ಆ ಲಕ್ಕೋಟಿಯಲ್ಲಿ ಏನಿರುವುದೆಂದು ನೋಡುವ ಕುತೂಹಲ ಜಾಸ್ತಿಯಾಗಿತ್ತು. ಕಾಗದವನ್ನು ಓದಿದೆ. "ನನ್ನ ನಿನ್ನ ಬಾಂಧವ್ಯದ ಕುರುಹೆಂದು ಪವಿತ್ರವಾದ ಗಾಂಧೀಜಿಯ ಚಿತೆಯ ಮೇಲೇರಿಸಿದ ಹೂವುಗಳನ್ನೂ, ಅವರ ನಿರ್ಮಲವಾದ ಚಿತೆಯ ಭಸ್ಮವನ್ನೂ ಕಳುಹಿಸಿದ್ದೇನೆ, ಸ್ವೀಕರಿಸು. ಇತಿ ನಿನ್ನವ, ದಿವಾಕರ — ಎಂದಿತ್ತು.

ನನ್ನ ಕೈ ಥರಥರನೆ ನಡುಗಿದವು. ಪವಿತ್ರವಾದ ಆ ವಸ್ತು ನನ್ನ ಕೈಯಲ್ಲಿ! ಪಕ್ಕದ ಮೇಜಿನ ಮೇಲಿಟ್ಟೆ. 'ಸಮಾಧಿ' ಯ ರೀತಿಯಲ್ಲಿ

ಅಲಂಕಾರ ಮಾಡಿದೆ. ನನ್ನ ಭಾರತೀಯ ಗೆಳೆಯರಿಗೆ ತಿಳಿಸಿದೆ. ಊರ ಲ್ಲೆಲ್ಲಾ ಮಿಂಚಿನ ವೇಗದಲ್ಲಿ ಸುದ್ದಿ ಹರಡಿತು, ನೂರಾರು **ಜನ** ನನ್ನ ರೂಮಿಗೆ ಬರತೊಡಗಿದರು. ೩೦೧ ಮೆಲ್ಬೋರ್ನ್ ಬೀದಿಯು ಕೆಲವು ದಿನ ಯಾತ್ರಾಸ್ಥಳ ಆದಂತೆಯೇ ಆಯಿತು. ಎಂತಹ ಗಂಭೀರ ಜನ ಅವರು! ಒಬ್ಬೊಬ್ಬರಾಗಿ ಬಂದು ತಮ್ಮ ಗೌರವವನ್ನು ಸೂಚಿಸಿ ಹೋಗುತ್ತಿದ್ದರು. ಕೆಲವರು ಹೂವು ಹಣ್ಣುಗಳನ್ನು ಸಮರ್ಪಿಸಿದರು. ಕೆಲವರು ಅಲ್ಲಿಬಂದು ಕುಳಿತು ಬೈಬಲ್‌ನ ಕೆಲವು ಶ್ಲೋಕಗಳನ್ನು ಹೇಳಿ ತಮ್ಮ ಮನಸ್ಸನ್ನು ಸಂತೈಸಿಕೊಂಡರು. ಮತ್ತೆ ಕೆಲವರು ಏನೂ ಮಾತನಾಡದವರಾಗಿ, ಅಲ್ಲಿಯೇ ನಿಂತುಬಿಟ್ಟರು. ಆ ದೃಶ್ಯ ನೋಡಿದ ನಾನು ಚಕಿತನಾಗಿ ಹೋದೆ. ಗಾಂಧೀಜಿ ಪುಣ್ಯ ಪುರುಷರು. ನಮ್ಮ ನಾಡು ಭಾಗ್ಯನಾಡು, ಎಂದುಕೊಂಡೆ. ಅಮೇರಿಕಾದ ಪ್ರತಿನಿಧಿಗಳನ್ನು ಕೇಳಬೇಕೆ! ಕೆಲ ವರು ಸುದ್ದಿ ಕೇಳಿ ಬರೆದುಕೊಂಡರು. ಇನ್ನು ಕೆಲವರು ಗಾಂಧೀಜಿಯ ಚಿತೆಯ ಭಸ್ಮದ ಚೀಲದ ಭಾವಚಿತ್ರವನ್ನು ತೆಗೆದುಕೊಂಡರು. ಮರುದಿನ ಪತ್ರಿಕೆಗಳಲ್ಲಿ, "ಫಸ್ಟ್ ಇಂಡಿಯನ್ ಟು ರಿಸೀವ್ ಮಹಾತ್ಮಾಸ್ ಆಷೆಸ್ ಇನ್ ಅಮೆರಿಕಾ" (ಅಮೆರಿಕಾದಲ್ಲಿ ಮಹಾತ್ಮರ ಅಸ್ಥಿಶೇಷ ವನ್ನು ಪಡೆದ ಭಾರತೀಯರಲ್ಲಿ ಪ್ರಥಮರು) ಎಂದು ಸುದ್ದಿ ಪ್ರಕಟಿಸಿ ದರು. ಆ ದಿನ ಸಂಜೆ ಪುನಃ ನನ್ನ ಕೊಠಡಿ ಯಾತ್ರಾಸ್ಥಳವೇ ಆಯಿತು.

ಇತಿ ಹೀಗೆ,

ಕೃಷ್ಣ.

—:o:—

## ಇಪ್ಪತ್ತು

ಬೊಂಬಾಯಿ,
೧೫-೩-೪೮

ಅಣ್ಣ ನಾಡಿಗ,

ನೀನು ೨೯ನೆಯ ಫೆಬ್ರವರಿ ಬರೆದ ಕಾಗದ ಬಂದು ಒಂದು ವಾರ ವಾಯಿತು. ಇಂಗ್ಲಿಷ್‌ನಲ್ಲಿ ಬರೆದುದನ್ನು ಕ್ಷಮಿಸು ಎಂದಿದ್ದೀಯ, ಕೇಳಬಹುದೇ? ಅಂತೂ ಅದೇಕೆ ಇಂಗ್ಲಿಷಿನಲ್ಲಿ ಬರೆದೆಯೆಂಬುದು ನನಗರ್ಥವಾಗದೆ ಇದೆ. ಆದರದು ನಿನ್ನಿಷ್ಟ.

ಉತ್ತರ ಬರೆಯಲು ಒಂದು ವಾರ ತಡಮಾಡಿದೆ. ನಿನ್ನ ಕಾಗದ ಸೇರುವ ಮುಂಚೆಯೇ ನಿನ್ನ ಹಳೆಯ ವಿಳಾಸಕ್ಕೊಂದು ಕಾಗದ ಹಾಕಿದೆ, ಅದೇನು ಅಲ್ಲಿಂದ ಬದಲಾಯಿಸಿಬಿಟ್ಟೆ? ಸಂಜೀವನಿಗೆ ಬರೆದಿರುವ ಕಾಗದದಲ್ಲಿ ಒಂದು ಕಾರಣವನ್ನೇನೋ ಕೊಟ್ಟಿರುವೆ. ವ್ಯಾಸವನ್ನು ಬರೆಯಲು ನಿಶ್ಶಬ್ದವಾದ ಸ್ಥಳ ಬೇಕಾಯಿತು. ಅಲ್ಲಿಗೆ ಹೋಗಿರುತ್ತೇನೆ ಎಂದಿದ್ದೀ. ನೀ ಮುಂಚಿದ್ದ ಜಾಗಕ್ಕೂ ಈಗಿನ ಸ್ಥಳಕ್ಕೂ ದೂರವೆಷ್ಟು? ಮೆಲ್‌ಬೋರ್ನ್ ಎಂಬುದು ಕೊಲಂಬಿಯಾ ನಗರದ ಬಡಾವಣೆಯೋ ಅಥವಾ ಪ್ರತ್ಯೇಕ ಊರೋ?

ಗಾಂಧೀಜಿಯವರ ಚಿತಾಸ್ಪರ್ಶಮಾಡಿದ್ದ ಪುಷ್ಪಗಳ ವೃತ್ತಾಂತ ಬರೆದಿದ್ದೆ ನೋಡು, ಅದನ್ನು ನಮ್ಮ ಸ್ನೇಹಿತರಿಗೆಲ್ಲ ಓದಿ ಹೇಳಿದೆ. ಅಲ್ಲದೆ ನನ್ನ ಸಹೋದ್ಯೋಗಿಗಳೆಲ್ಲ ಸೇರಿ ಆ ಕತೆಯನ್ನು ನಮ್ಮ ಪತ್ರಿಕೆಯ ಸಂಪಾದಕೀಯದಲ್ಲೆ **"Floral Relics draw crowds in America"** ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದೆವು. ಈ **Air letter** ಬರೆಯದೆ ಬೇರೆ ಲಕ್ಕೋಟೆಯಲ್ಲಿ ಬರೆದಿದ್ದರೆ ಅದನ್ನು ಕತ್ತರಿಸಿ ಕಳುಹಿಸುತ್ತಿದ್ದೆ.

ನಿನ್ನ ವ್ಯಾಸ ಯಾವ ಘಟ್ಟದಲ್ಲಿದೆ? ಎಂದು ಮುಗಿಸಬೇಕು? ಭಾರತೀಯ ವೃತ್ತಪತ್ರಿಕಾ ಪ್ರಪಂಚ ಕುರಿತು ಆಂಗ್ಲ ಮಹಿಳೆಯೊಬ್ಬಳು

ಬರೆದ ದಪ್ಪ ಪುಸ್ತಕ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಪ್ರಕಟಣಾಲಯದ ವರದು. ಮಾಹಿತಿ ಕೊಟ್ಟಿದ್ದೆನಲ್ಲ ಆ ಪುಸ್ತಕ ನಿನಗೆ ಸಿಕ್ಕಿತೆ? ಅಥವಾ ಆ ವಿಷಯ ಬರೆದ ಕಾಗದವೇ ಸಿಗಲಿಲ್ಲವೋ? ಹಾಗೆಯೇ ನಾನು ನಿನ್ನ ವ್ಯಾಸದ ಬಗ್ಗೆ ನನಗೆ ತೋರಿದ ಸೂಚನೆಗಳು, ನಿನ್ನ ಪ್ರಶ್ನಾವಳಿಗೆ ಉತ್ತರಗಳು ಅದನ್ನೆಲ್ಲ ಡಿಸೆಂಬರ್ ತಿಂಗಳಲ್ಲಿ ಕಳುಹಿಸಿದ್ದೆನಲ್ಲ, ಅದು ಬಂತೋ ಬರಲೇ ಇಲ್ಲವೊ? ನಿನ್ನ ಕಾಗದಗಳಲ್ಲಿ ಅದೆಲ್ಲದರ ಬಗ್ಗೆಯೂ ಮಗುಂ ಆಗಿರುತ್ತೀಯಲ್ಲಾ! ನನ್ನನ್ನು ನಿನ್ನ ಅಂತರ್ಯಕ್ಕೆ ತೆಗೆದು ಕೊಳ್ಳಪ್ಪಾ. ನನ್ನನ್ನು ದೂರೀಕರಿಸಿಬಿಡುವುದು ಧರ್ಮವಲ್ಲ. ಈ ಬಗೆಯ ಶಿಕ್ಷೆಗೆ ನಾನೇನು ತಪ್ಪುಮಾಡಿದ್ದೀನಿ?

ನೀನು ಯಾವಾಗ ಅಮೆರಿಕೆ ಬಿಡುವುದು? ಒಬ್ಬ ಅಮೆರಿಕೆಯ ಗೆಳೆಯ ಭಾರತಕ್ಕೆ ಬರಲು ಹಾತೊರೆಯುತ್ತಿದ್ದನೆಂದು ಹೇಳಿದ್ದೆಯಲ್ಲ ಆತನ ಮನೋ ನಿರ್ಧಾರ ಹಾಗೆಯೇ ಇದೆಯೋ? ನಿನ್ನ ಕಾರ್ಯಕ್ರಮ ಏನು ಮಾಡಬೇಕೆಂದಿದ್ದೀ? ಈಗ ಕನ್ನಡದಲ್ಲಿ ಒಳ್ಳೆಯ ಪತ್ರಿಕೆಯ ಅಗತ್ಯ ವಿದೆ. ಆದರೆ ಬೆಂಬಲವಿಲ್ಲದೆ ಹೋಗುತ್ತದೆ. ಕೃಷ್ಣಶರ್ಮರಿಗೇ ಸಾಧ್ಯ ವಾಗದೆ ಹೋದ ಕೆಲಸವಾಗಿದೆ. ಕಾಗದಾಭಾವದಿಂದ ದೇಶಬಂಧು ವಾರಪತ್ರಿಕೆ, ವಿಶ್ವಕರ್ನಾಟಕ ವಾರಪತ್ರಿಕೆ ನಿಂತುಹೋಗಿವೆ. ಏತನ್ಮಧ್ಯೆ ಎಚ್. ಕೆ. ಕುಮಾರಸ್ವಾಮಿ 'ಅರುಣ' ಎಂದೂ ರಾಮಣ್ಣ 'ವಿಜಯಾ' ಎಂಬುದಾಗಿಯೂ 'ಮೈಸೂರುಪತ್ರಿಕೆ'ಯ ಥರದ ದೈನಿಕ ಪತ್ರಿಕೆಗಳನ್ನು ಹೊರಡಿಸುತ್ತಿದ್ದಾರೆ.

ನಿಮ್ಮ ಅಮೆರಿಕಾ ದೇಶದಲ್ಲೀಗ ಬೇಸಗೆಯೋ ಅಥವಾ ಇನ್ನೂ ಚಳಿಗಾಲವೋ? ಇಲ್ಲವೇ ವಸಂತಋತು ಆಗಮಿಸಿದೆಯೋ?

ಶೌರಿ.

—:o:—

## ಇಪ್ಪತ್ತೊಂದು

೩೦೧ ಮೆಲ್ಬೋರ್ರ್ನ ಬೀದಿ,
ಕೊಲಂಬಿಯ
೧೫-೩-೪೮

ಚಿ|| ಶೌರಿ.

ಗಾಂಧೀಜಿ ತೀರಿಕೊಂಡಾಗಿನಿಂದ ನಾನು ಈ ಸಂಸ್ಥಾನದಲ್ಲಿ ಅನೇಕ ಭಾಷಣಗಳನ್ನು ಮಾಡುತ್ತಲಿದೇನೆ. ಅದರ ಫಲವಾಗಿ ಬಾಪು ವಿನ ಮೇಲೆ ವಿಷಯ ಸಂಗ್ರಹಿಸಿ ಒಂದು ಪ್ರಬಂಧ ಬರೆದಿದ್ದೇನೆ. ಅದನ್ನೇ ಪುಟ್ಟ ಪುಸ್ತಕರೂಪವಾಗಿ ಪ್ರಕಟಿಸಬೇಕೆಂದು ಮಾಡಿದ್ದೇನೆ. ಶ್ರೀ ದಿವಾಕರರಿಂದ ಮುನ್ನುಡಿ ಬರೆಸಬೇಕೆಂದಿದ್ದೇನೆ. ಪಂಡಿತ ಜವಹರ ಲಾಲರಿಂದ ಲೇಖನವೊಂದನ್ನು ಕೇಳಬೇಕೆಂದಿದ್ದೇನೆ. ಅವರಿಂದ ನನಗೆ ಈ ದಿನವೇ ಕಾಗದ ಬಂದಿದೆ. ನಮ್ಮ ಭಾರತೀಯ ವಿದ್ಯಾರ್ಥಿ ಸಂಘದ ಕೆಲಸವನ್ನು ಶ್ಲಾಘಿಸಿ ಕಾಗದ ಬರೆದಿದ್ದಾರೆ.

ನನ್ನ ವ್ಯಾಸ ಮುಗಿಯುತ್ತ ಬಂದಿದೆ. ನೀನು ಕಳುಹಿಸಿದ ವಿಷಯ ಗಳು, ಪ್ರಶ್ನಾವಳಿಗೆ ಉತ್ತರಗಳು ತುಂಬಾ ಸಮರ್ಪಕವಾಗಿವೆ. ಮರಾಠಿ, ತಮಿಳು, ಮಲೆಯಾಳ ಪತ್ರಿಕೆಗಳ ಮಾಹಿತಿ ಬೇಕು, ಕಳುಹಿಸಿಕೊಡು.

ಹಿರಿಯ ಸಾಹಿತಿಗಳಾದ ಶ್ರೀ. ಡಿ. ವಿ. ಗುಂಡಪ್ಪನವರ ಕಾಗದವೂ ಇಂದೇ ಬಂದಿದೆ. ನನ್ನ ಬಗ್ಗೆ ಬರೆದ ಒಂದು ವಾಕ್ಯ ನಿನಗೆ ತಿಳಿಸ ಬೇಕೆಂದು ಇಷ್ಟ.

**"Judging from the style and tone of your letters, I see a strong vein of sentimentalism in your mental composition. I don't despise sentiment. But I should have you develop the bump for realism more**

**assidously. A journalist should be objective, unemotional and radio-crative."**

ಮುತ್ತಿನಂತಹ ಮಾತುಗಳಲ್ಲವೇನೋ! ಪ್ರತಿಯೊಬ್ಬ ತರುಣ ಪತ್ರಿಕೋದ್ಯಮಿಯು ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ಬಿಡಿಮುತ್ತುಗಳವು.

ಏನಂತೀಯೋ?

ಇತಿ ಹೀಗೆ,
ನಾಕ್ಕಮೂ.

—:o:—

## ಇಪ್ಪತ್ತೆರಡು

ಬೊಂಬಾಯಿ,
೨೬—೩—೪೮.

ಅಣ್ಣಾ ನಾಡಿಗ,

ನಿನ್ನ ಕಾಗದ ಗುಜನೆಯ ತಾರೀಖು ಬರೆದದ್ದು ನಾಲ್ಕೈದು ದಿನಗಳ ಹಿಂದೆ ಬಂತು. ನಿನ್ನೆ ಕಾಮಣ್ಣನ ಹಬ್ಬ ಈವತ್ತು, ಕ್ರಿಸ್ತನನ್ನು ಶಿಲುಬೆಗೇರಿಸಿದ ದಿನ " **Good Friday** ", ನಾನು ಮೂರು ದಿನ ರಜ ತೆಗೆದುಕೊಂಡಿದ್ದೇನೆ. ಜನವರಿ ೩೦ನೆಯ **Sad Friday** ಯಿಂದಂತೂ ಕೆಲಸ ವಿಪರೀತವಾಗಿಬಿಟ್ಟಿದೆ. ದಣುವಾರಿಸಿಕೊಳ್ಳೋಣ, ಹೃದಯ ಶಾಂತಿಯನ್ನು ಗಳಿಸಿರುವ ಆಪ್ತ ಗೆಳೆಯನ ಸಹವಾಸದಲ್ಲಿ ಮೂರುದಿನ ಕಳೆದು ನಾನೂ ಒಂದಷ್ಟು ಸಂತೃಪ್ತತೆಯನ್ನು ಗಳಿಸಿಕೊಂಡು ಹೋಗೋಣವೆಂದು ಬಂದಿದ್ದೇನೆ. ಅವನ ಸಹಜ ಸೌಜನ್ಯದಿಂದ ನನ್ನನ್ನು ಅತಿಥಿಯಾಗಿ ಸ್ವೀಕರಿಸಿದ್ದಾನೆ. ಆದರ ಸವಿ ನಿನಗೆ ಗೊತ್ತಿಲ್ಲ. ಬಹುಶಃ ಸಾವಿರಾರು ಮೈಲಿಗಳ ದೂರದಲ್ಲಿರುವ ನೀನು. ಜಗತ್ತಿನ ಅತ್ಯಂತ ಬಲಾಢ್ಯ ದರ್ಪ ಪೂರ್ಣರಾಷ್ಟ್ರದಲ್ಲಿನ ವಾಸಕ್ಕಿಂತ ಕಂಡಿವಿಲಿಯ ಕೃಷ್ಣ

ಕುಂಜದ ವಾಸವೇ ಲೇಸೆಂದು ಭಾವಿಸಿ ನನ್ನನ್ನು 'Envy' ಮಾಡು ತ್ತಿರಬೇಕು. ಹೌದೋ ಅಲ್ಲವೋ ನೀನೇ ಹೇಳು. ನಿನ್ನ ಹೊಟ್ಟೇ ಕಿಚ್ಚನ್ನು ಕೆರಳಿಸಲು ಇನ್ನೂ ಒಂದೆರಡು ಸಂಗತಿ ಹೇಳುತ್ತೇನೆ ಕೇಳು. ನಿನ್ನೆ ಸಂಜೆ ವರ್ಣ್ಣನೀವಾದ ಕಡಲಿನ ಕಡೆಗೆ ಹೋಗಿ ಕಪ್ಪೇಚಿಪ್ಪುಗಳನ್ನಾ ಯ್ದೆವು. ರಾತ್ರಿ ಬೆಳೆದಿಂಗಳಲ್ಲಿ ಮೂರು ಮೈಲಿ ನಡೆದು ಬಂದೆವು. ರಸಭಟ್ಟಯಿಳಿದ ಟೊಮೇಟೋ ಸಾರನ್ನು ಹೀರಿ ನಾವುಂಟೋ ಮೂರು ಲೋಕವುಂಟೋ ಎಂದು ತೇಗಿದೆವು. ಈ ಬೆಳಿಗ್ಗೆ ಅಕ್ಕಿರೊಟ್ಟಿ ಲಪಟಾ ಯಿಸಿದೆವು. ಹಾಗೆಯೇ ಬಟಾಣಿ ಉಸುಳಿ ಮೆದ್ದೆವು. ಸಾಕುಸಾಕೆನ್ನು ತ್ತೀಯೇನೋ. ಆದ್ದರಿಂದ ನಮ್ಮ ಪುರಾಣವನ್ನು ಸಾಕುಮಾಡಿ ನಿನ್ನ ಕಾರ್ಯಕಲಾಪವೇತ್ಯಾದಿಗಳ ಮಾತೆತ್ತುತ್ತೇನೆ.

ನಿನ್ನ ಪುಸ್ತಕ ಬರುವ ವಿಷಯಕೇಳಿ ಬಹಳ ಸಂತೋಷವಾಯಿತು. ಹಲವಾರು ಗೆಳೆಯರಿಗೆ ಹೇಳಿದೆ. ಎಲ್ಲರೂ ಸಂತೋಷಪಟ್ಟರು. ಮರಾಠಿ ಯ ಲೋಕಸತ್ತಾದಲ್ಲಿ ಕೆಲವು ದಿನದ ಹಿಂದೆ ನಿನ್ನ ಬಗ್ಗೆ ಹದಿನೈದಿಪ್ಪತ್ತು ಸಾಲಿನ ಪ್ರಶಂಸೆ ಬಂದಿತ್ತು. (ಬೆಳಗಾಂವಿಯಿಂದ ಅಮೇರಿಕಾಕ್ಕೆ ಯಾ ರೋ ಬಂದಿದ್ದಾರಂತಲ್ಲ. ಅವರ ಮೂಲಕ ಬಂದ ಪತ್ರದಿಂದ ಲೋಕ ಸತ್ತಾದ ಬೆಳಗಾಂವಿ ಪ್ರತಿನಿಧಿ ಆ ಸುದ್ದಿಯನ್ನು ಶೇಖರಿಸಿ ಕಳುಹಿಸಿ ದ್ದನಂತೆ.)

ನಿನ್ನ ಪುಸ್ತಕದ ಬಗ್ಗೆ ನನ್ನ ಅಭಿಪ್ರಾಯ ಪ್ರಕಟಿಸಬೇಕೆಂದಿದ್ದಿ. ನೀನು ನನ್ನ ಅಣ್ಣ – ಅದಕ್ಕಿಂತ ಹೆಚ್ಚಾಗಿ ನಾನೇನನ್ನೂ ಹೇಳುವುದಿಲ್ಲ. ನಿನಗೆ ತಿಳಿದ ಹಾಗೆ ಮಾಡುವುದು.

ಇತಿ ಹೀಗೆ,

ಶೌರಿ.

—:o:—

## ಇಪ್ಪತ್ತೊಮ್ಮರು

೩೦೧, ಮೆಲ್ಬೋರನ್ ಬೀದಿ,<br>೨೯—೩—೪೮.

ಚಿ|| ಶೌರಿ :

೧೨೦೦, ರಾಲಿನ್ಸ್ ಕೊಠಡಿಯನ್ನು ಬಿಟ್ಟು ಈಗಾಗಲೇ ತಿಂಗಳೆರಡಾಯಿತು. ಕಾರಣ ಅಲ್ಲಿ ನಾಲ್ವರು ಒಂದೇ ಕೊಠಡಿಯಲ್ಲಿದ್ದೆವು. ಇಲ್ಲಿ ನಾನೊಬ್ಬನೇ. ವ್ಯಾಸ ಮತ್ತು ಪುಸ್ತಕ ಬರೆಯಲು ಅನುಕೂಲವಾದ ಮತ್ತು ಶಾಂತವಾದ ವಾತಾವರಣವಿದೆ. ಅಡಿಗೆ ಮಾಡಿಕೊಳ್ಳಲು ಅನುಕೂಲವಾಗಿ ಅಡಿಗೆಯ ಮನೆಯೂ ಇದೆ. ಕಾಲೇಜಿಗೆ ಸುಮಾರು ಒಂದೂವರೆ ಮೈಲಿ ದೂರ. ಯಾವ ಗಲಾಟೆಯೂ ಇಲ್ಲ. ಮಲ್ಲೇಶ್ವರದ ಕೊನೆಯ ಬಡಾವಣೆ ಇದ್ದಂತಿದೆ.

ನನ್ನ ವ್ಯಾಸ ಮುಗಿಯುತ್ತಾ ಬಂದಿದೆ. ಸುಮಾರು ೫೦ ಡಾಲರು (೧೬೦—೦—೦ ರೂ.) ಗಳನ್ನು ಖರ್ಚು ಮಾಡಿ ವಿಮಾನ ಮೂಲಕವಾಗಿ ಭಾರತದ ೨೦೦ ದೇಶಭಾಷಾ ಸಂಪಾದಕರುಗಳಿಗೆ ನನ್ನ ಪ್ರಶ್ನಾವಳಿಗಳನ್ನು ಕಳುಹಿಸಿಕೊಟ್ಟೆ. ಹಾಗೆಯೇ ಕನ್ನಡದ ೨೫ ಸಂಪಾದಕರುಗಳಿಗೆ ಪ್ರಶ್ನಾವಳಿಗಳನ್ನು ಕಳುಹಿಸಿಕೊಟ್ಟೆ. ವಾರ್ತಾದ ಶ್ರೀ. ವೀರಣ್ಣಗೌಡರ ವಿನಾ ಇನ್ನಾರೂ ಉತ್ತರ ಕಳುಹಿಸಿಕೊಡಲಿಲ್ಲ. ನಂತರ ಶ್ರೀ. ಡಿ. ವಿ. ಜಿ. ಯವರಿಗೆ, ಶ್ರೀ. ದಿವಾಕರರಿಗೆ ನನ್ನ ಸ್ಥಿತಿ ಮನವಿ ಮಾಡಿಕೊಂಡೆ. ಅವರು ಕೊನೆಗೆ ಅಮೂಲ್ಯವಾದ ವಿಷಯಗಳನ್ನು ಸಂಗ್ರಹಿಸಿ ಕಳುಹಿಸಿಕೊಟ್ಟರು.

ಏಪ್ರಿಲ್ ೨೨ಕ್ಕೆ ಟೈಪುಮಾಡಿದ ವ್ಯಾಸದ ಕಂತೆ ಆಫೀಸಿಗೆ ಸೇರಬೇಕು. ಸುಮಾರು ೨೫೦ ಪುಟ ಆಗಿದೆ. ಮೇ ೧೪ಕ್ಕೆ ಪರೀಕ್ಷೆ. ಮೇ ೨೪ಕ್ಕೆ ಬಾಯಿ ಪರೀಕ್ಷೆ. ಜೂನ್ ೧ಕ್ಕೆ ಫಲಿತಾಂಶ. ಜೂನ್ ೪ಕ್ಕೆ ಪದವೀ ದಾನ ಸಮಾರಂಭ ನಡೆಯುತ್ತದೆ. ನಂತರ ಅಮೇರಿಕಾ ಬಿಡುವ ಯೋಚನೆ.

# ನಮ್ಮ ಕಾಗದಗಳು

ಜೂನ್ ೨೦ರಲ್ಲಿ ನಡೆಯುವ ರಿಪಬ್ಲಿಕನ್ ರಾಷ್ಟ್ರಕೂಟಕ್ಕೆ ಫಿಲಡೆಲ್ಫಿಯಾ ನಗರಕ್ಕೆ ತೆರಳುವೆನು. ಅದನ್ನು ಮುಗಿಸಿಕೊಂಡು ಜುಲೈ ೨ನೇ ತಾರೀಖು ಅಮೇರಿಕೆಯ ೬೫೦ ವಿದ್ಯಾರ್ಥಿಗಳೊಡನೆ ಇಂಗ್ಲೆಂಡಿಗೆ ತೆರಳುವೆನು.

ನನ್ನ ಅಮೇರಿಕೆಯ ಗೆಳೆಯ ರಿಚರ್ಡ್, ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡಿದ್ದಾನೆ. ಆದರೆ ಮೊನ್ನೆ ಅಧ್ಯಕ್ಷ ಟ್ರೂಮನ್ ಹೊರಡಿಸಿದ Selective Service Draft ನಿಂದ ಆತಂಕ ಬಂದಿದೆ. ಆತ ಹೊರಡುವ ವೇಳೆಗೆ ಅಮೇರಿಕೆಯ ಕಾಂಗ್ರೆಸ್ಸು ಆ ಕಾನೂನು ತಯಾರಿಸಿದರೆ ಆತ ಬರುವುದು ಕಷ್ಟವಾದೀತೇನೋ. ಉಳಿದೆಲ್ಲ ಸಿದ್ಧತೆಗಳು—ಹಣ – ಪ್ಯಾಸ್ ಪೋರ್ಟ್ – ವಿಸಾ – ಎಲ್ಲಾ ಆಗಿವೆ.

ಮುಂದಿನ ಕಾರ್ಯಕ್ರಮದ ವಿಷಯ ಕೇಳಿದ್ದೀ. ೫ ವರ್ಷ ತಡವಾದರೂ ಚಿಂತೆಯಿಲ್ಲ. ಕನ್ನಡ ಪತ್ರಿಕೆಯೊಂದನ್ನು ಹೊರಡಿಸಿಯೇ ತೀರಬೇಕಾಗಿದೆ. ನೀವೆಲ್ಲ ನೆರವಿಗೆ ಬರುತ್ತೀರಲ್ಲ! ಇಲ್ಲಿಯ ಪತ್ರಿಕಾಲಯಗಳು, ಅವುಗಳ ವ್ಯವಸ್ಥೆ ನೋಡಿದ ಮೇಲೆ ನಮ್ಮ ದೇಶದಲ್ಲಿ ಅದರ ಹತ್ತರಲ್ಲಿ ಒಂದು ಭಾಗವಾದರೂ ನಡೆಸಲು ಸಾಧ್ಯವೇ ಎಂಬ ಭಯ ಬರುತ್ತಿದೆ. ಭಾರತಕ್ಕೆ ಬಂದ ಮೇಲೆ ತಾನೆ ಈ ಯೋಚನೆಗಳೆಲ್ಲಾ.

ಮೈಸೂರು ರಾಜ್ಯಾಂಗ ರಚನಾ ಸದಸ್ಯರ ಚುನಾಯಿತರಾದ ಪಟ್ಟಿಯನ್ನು ನೋಡಿದೆ. ಶ್ರೀ. ಡಿ. ವಿ. ಜಿ. ಯವರು ಆರಿಸಿ ಬಂದಿದ್ದಾರಲ್ಲ. ಹಾಗಾದರೆ ಅವರೇ ತಾನೇ, ರಾಜ್ಯಾಂಗ ಸಭೆಯ ಅಧ್ಯಕ್ಷರು. ತುಂಬಾ ಯೋಗ್ಯವಾದ ಚುನಾವಣೆಯಾದೀತು. ಆದರೆ .... .... .... ?

ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಅಧ್ಯಾಪಕರಾಗಿ ನಮ್ಮ ಡಾ|| ಶ್ರೀನಿವಾಸನ್ ಹೋಗುವುದು ಕೇಳಿ ಆನಂದ. ಹೆಮ್ಮೆ. ಡಾ|| ರಾಧಾಕೃಷ್ಣನ್ ಆದ ನಂತರ ಅಲ್ಲಿಗೆ ಹೋಗುವ ಎರಡನೆಯ ಭಾರತೀಯರು ಇವರೇ. ಮೈಸೂರಿಗೂ ಒಂದು ಹೆಮ್ಮೆಯೇ ಸರಿ.

ಅಮೇರಿಕೆಗೆ ಮಾರ್ಚಿ ೨೦ನೇ ತಾರೀಖು ಬೆಳಿಗ್ಗೆ ೧೦-೫೭ ಕ್ಕೆ ಸರಿಯಾಗಿ ವಸಂತ ಮಾಸ ಬಂತು. ಈಗ ಬೆಂಗಳೂರಿನ ಹವಾದಂತೆಯೇ ಇದೆ ಇಲ್ಲಿ. ಜೂನ್‌ನಿಂದ ಸೆಪ್ಟಂಬರ್ ವರೆಗೆ ಸ್ವಲ್ಪ ಬಿಸಿಲು ಜಾಸ್ತಿ. ಇಲ್ಲಿಯೂ ಒಂದೊಂದು ದಿನ ೧೦೬° ವರೆಗೂ ಹೋಗುತ್ತವೆ.

ನಾ ಇನ್ನು ಬರಲೇ.

ಇತಿ ಹೀಗೆ,

ನಾಕೃಮೂ.

—:o:—

## ಇಪ್ಪತ್ತ್ನಾಲ್ಕು

ಬೊಂಬಾಯಿ,

೭—೪—೪೮.

ಅಣ್ಣ ನಾಡಿಗ,

ನಿನ್ನ ಕೇಬಲ್ಲು ಬಂತು, ೨೯ನೆಯ ತಾರೀಖಿನ ಕಾಗದವೂ ಬಂತು. ಖುಷಿ. ಈ ವೇಳೆಗೆ ನಾನು ಸಂಜೀವನ ಮನೆಯಿಂದ ಬರೆದಿದ್ದ ಕಾಗದವೂ ತಲಪಿರಬೇಕು. ತಮಿಳಿನ ಬಗ್ಗೆ ನಾನು ತಿಳಿಸಿದ್ದ ಮಾಹಿತಿ ಸಾಕೆ ಅಥವಾ ಇನ್ನೂ ಹೆಚ್ಚಿಗೆ ಬೇಕೆ? ಅಷ್ಟನ್ನೂ ಉಪಯೋಗಿಸಿಕೊಂಡಿದ್ದು, ಹೆಚ್ಚಿಗೆ ಬೇಕಾದರೆ ತಿಳಿಸು. ನಾನು ಕಳುಹಿಸಿ ಕೊಡುತ್ತೇನೆ.

ಒಟ್ಟಿನ ಮೇಲೆ ನಮ್ಮ ಜನ "ವಚನಕ್ಕೂ ದರಿದ್ರವೇ ಬಡ ಬ್ರಾಹ್ಮಣನೇ" ಎಂಬಂತೆ. ನೀನು ಎಷ್ಟೊಂದು ಜನಕ್ಕೆ ಪ್ರಶ್ನಾವಳಿಯನ್ನು ಕಳುಹಿಸಿಕೊಟ್ಟೆ, ಒಬ್ಬರಾದರೂ ಲಕ್ಷ್ಯ ಕೊಡದೆ ಹೋದರು. ಹಾಗೆಯೇ ನಾನಿಲ್ಲಿ ಎಷ್ಟೊಂದು ಜನರನ್ನು ಕೇಳಿದರೂ ಆಗ ಬಾ, ಈಗ ಬಾ, ಹೋಗಿ ಬಾ ಎಂದು ಸತಾಯಿಸುತ್ತಾರೆಯೇ ಹೊರತು ಆಗಲೇ ಕರೆದು ಕೊಡುವವರೊಬ್ಬರೂ ಇಲ್ಲ. ಈ ಸಣ್ಣತನ ಆಲಸ್ಯಗಳಿಂದಲೇ ನಮ್ಮ ಜನರಿಂದ ದೊಡ್ಡ ಕೆಲಸಗಳು ಸಾಗದೆ ಹೋಗುತ್ತವೆ. ಶ್ರೀ. ಡಿ.

ಪಿ. ಜಿ. ಯವರು ಕಳುಹಿಸಿಕೊಟ್ಟ ಸುದ್ದಿ ನಿನಗೆ ಅಪಾರ ಸಹಾಯವಾಗಿ ರಬೇಕು. ಆ ಮಹಾನುಭಾವನ ಸಾಧನೆಯನ್ನು ಕುರಿತು ಯೋಚಿಸಿ ಯೋಚಿಸಿದಂತೆಲ್ಲಾ ನನ್ನ ಸೋಜಿಗ ಇಮ್ಮಡಿಯಾಗುತ್ತಾ ಹೋಗುತ್ತದೆ.

ಶ್ರೀ. ಡಿ. ವಿ. ಜಿ. ಯವರು ನಿನ್ನ ಪ್ರಕೃತಿಯನ್ನು ಸರಿಯಾದ ರೀತಿಯಲ್ಲಿ ಕಂಡುಹಿಡಿದುಬಿಟ್ಟಿದ್ದಾರೆ. ಅತಿ ಹತ್ತಿರದಿಂದ ತಿಳಿದ ನಾವೆಲ್ಲಾ ನಿನ್ನ ಮನೋಧರ್ಮವನ್ನು ಹೇಗೆ ವಿಭಜಿಸಿ ಅರಿತುಕೊಂಡಿದ್ದೇವೆಯೋ, ನಿನ್ನ ಪತ್ರಗಳು ಬರೆದಾಗಲೇ ಡಿ. ವಿ. ಜಿ. ಯವರು ಆ ತೀರ್ಮಾನಗೆ ಬಂದಿದ್ದಾರೆ. ನಿನ್ನ ಭಾವೋದ್ರೇಕ ಪ್ರವೃತ್ತಿಯನ್ನು, ಅನುಭವಿಕ ಪರದಾಟವನ್ನು ಎಷ್ಟು ಬೇಗ ನೀನು ಗೆದ್ದುಕೊಳ್ಳುತ್ತೀಯೋ ಅಷ್ಟೂ ಒಳ್ಳೆಯದು. ತರ್ಕ, ಸಿಧಾನ, ಪಟ್ಟು ಹಿಡಿಯುವುದು ನಿನ್ನಲ್ಲಿ ಇನ್ನೂ ಜಾಸ್ತಿಯಾಗಬೇಕು. ಆಗ ಮಹಾಕಾರ್ಯಗಳು ನಿನ್ನಿಂದ ನೆರವೇರುತ್ತವೆ.

ನಿನ್ನ ಮುಂದಿನ ಯೋಜನೆಗಳ ಪ್ರಸ್ತಾಪವನ್ನೆತ್ತಿದ್ದಿ. ನನ್ನ ಅಭಿಪ್ರಾಯವನ್ನು ಕೇಳುವುದಾದರೆ ನಿನ್ನ ಕಾರ್ಯಕ್ರಮಗಳು ಈಗ ಕನಸಾಗಿರಲಿ. ಭಾರತಕ್ಕೆ ಬಂದಮೇಲೆ ಕಾರ್ಯಕ್ಷೇತ್ರವನ್ನು ಪರೀಕ್ಷಿಸಿದನಂತರ ಕಾರ್ಯಕ್ರಮ, "Blue Print" ಆಗಿ ಮಾರ್ಪಡಲಿ. ಹಲವು ಜನ ಹಿಂದೆ ನಿನಗೆ ಕೊಟ್ಟಿದ್ದ ಮಾತನ್ನೇ ಈಗಲೂ ನೆಚ್ಚಿಕೊಂಡಿರಬೇಡ. **ಜೀವನ ಸ್ಥಾವರವಲ್ಲ, ಜಂಗಮ.** ಅವರೆಲ್ಲರಿಗೂ ಹೊಸಹೊಸ ಹೊಣೆಗಾರಿಕೆಗಳು ಹೊಸಹೊಸ ಸಂಸಾರ ಬಂಧನಗಳು ಬಂದಿರುತ್ತವೆ. ಆದರೆ ನೀನು ಮಾತ್ರ ನಿನ್ನ ಗುರಿಯನ್ನು ಸಾಧಿಸಿಯೇ ತೀರುತ್ತೀಯೆಂದು ನನಗೆ ಖಾತರಿ ಇದೆ.

ಕೃಷ್ಣಶರ್ಮರೊಡನೆ ಪತ್ರವ್ಯವಹಾರ ಇಟ್ಟೇ ಇಲ್ಲ ನಾನು. ಇಷ್ಟರಲ್ಲೇ ಬರೆಯುತ್ತೇನೆ.

ನಿನ್ನ ಅಮೇರಿಕಾ ಗೆಳೆಯರ ಮಾತೇನಾಯಿತು? ಡಾ|| ಎಮ್. ಎನ್. ಶ್ರೀನಿವಾಸರು ಇನ್ನೂ ಐದಾರು ತಿಂಗಳ ನಂತರ ಆಕ್ಸ್‌ಫರ್ಡ್‌ಗೆ

ತೆರಳುತ್ತಾರೆ. ನೀನು ಇಂಗ್ಲೆಂಡಿಗೆ ಹೋದಾಗ ಭರತರಾಜಸಿಂಗನನ್ನು ಕೇಂಬ್ರಿಡ್ಜ್‌ನಲ್ಲಿ ನೋಡುವುದು.

ಹಾಗಾದರೆ ಅಕ್ಟೋಬರ್ ೨ಕ್ಕೆ ತಾನೇ ನಿನ್ನನ್ನು ನೋಡುವುದು. ಮುದುಕ ಹೋಗಿಬಿಟ್ಟ. . . . ರಾಷ್ಟ್ರೀಯ ನಿಧಿ ಮಾಡುತ್ತಿದ್ದಾರೆ. ಪ್ರತಿಯೊಬ್ಬರೂ ಹತ್ತುದಿನದ ಗಳಿಕೆಯನ್ನು ಕೊಡಬೇಕೆಂದು ರಾಜೇಂದ್ರ ಬಾಬುವಿನ ಆಜ್ಞೆಯಾಗಿದೆ. ನನ್ನ ಮುಳಲು ಭಕ್ತಿಯ ಕಾಣಿಕೆ ಸಲ್ಲಿಸಿದ್ದೇನೆ.

ಶೌರಿ,

—:o:—

## ಇಪ್ಪತ್ತೈದು

ಕೊಲಂಬಿಯ,
೧೫-೪-೪೮.

ಚಿ॥ ಶೌರಿ :

ನಿನ್ನ ಏಪ್ರಿಲ್ ೭ ನೇ ತಾರೀಖಿನ ಪತ್ರ ನಿನ್ನೆ ಮುಟ್ಟಿತು.

ಶೌರಿ, ನಿಜವಾಗಿಯೂ ನಿನ್ನ ಕಾಗದ ಓದಿ ಹೊಟ್ಟೆಕಿಚ್ಚು ಪಟ್ಟೆನಯ್ಯ. ನೀವು ಅಂದು ಆ ಟೊಮ್ಯಾಟೊ ರಸಭಟ್ಟೆ ಇಳಿಸಿದರಲ್ಲ, ಅದರ ವಾಸನೆ ಇಲ್ಲಿಗೆ ಹೊಡೆಯಿತು ನೋಡು. ಅದರ ಅನುಭವ ಸವಿದ ನಾನು ರುಚಿಯನ್ನು ನೆನೆಸಿಕೊಂಡು ಬಾಯಲ್ಲಿ ನೀರು ತಂದುಕೊಳ್ಳುತ್ತಿದ್ದೇನೆ. ವೀರೋಸೋವದ ಹವಾ ಸೇವನೆಯ ದೃಶ್ಯದ ನೆನಪು ಸ್ವಲ್ಪಕಾಲದ ವರೆಗೆ ಸಹಿಸಿಕೊಳ್ಳುತ್ತೇನೆ. ಕಾಂಡಿವಿಲಿಯ ಸಂಜೀವನ ಕಣ್ವಾಶ್ರಮದಲ್ಲಿ ನೆರಳು ಒಂದೇ ಅಲ್ಲ, ಶಾಂತಿಯೂ ಸಿಕ್ಕುವುದು ನಮ್ಮ ಪುಣ್ಯ. ವಿರಾಮಕ್ಕಾಗಿ, ವಿಹಾರಕ್ಕಾಗಿ ನೀ ಆ ಸ್ಥಳವನ್ನು ಆರಿಸಿಕೊಂಡದ್ದು ಯೋಗ್ಯವೇ.

ಹಿಂದಿನ ಕಾಗದದಲ್ಲಿ ಒಂದು ಮುಖ್ಯ ವಿಷಯವನ್ನು ಬರೆಯುವುದೇ ಮರೆತುಬಿಟ್ಟಿದ್ದೆ. ಮಾರ್ಚ್ ೨೯ ನೇ ತಾರೀಕು ಅಮೇರಿಕಾದ

ಎರಡನೆಯ ಮುಖ್ಯ ನಗರವಾದ ಚಿಕಾಗೋ ನಗರಕ್ಕೆ ಭೇಟಿ ಕೊಟ್ಟೆದ್ದೆ. ಚಿಕಾಗೋ ನಗರ ಯಾವಾಗಲೂ ಹೊಗೆಯಿಂದ ತುಂಬಿಕೊಂಡಿರುವಂತೆ ಕಾಣುತ್ತದೆ. ಊರು ಬಹಳ ಗಲೀಜು. ಹುಬ್ಬಳ್ಳಿ ಜ್ಞಾಪಕಕ್ಕೆ ಬರು ತ್ತದೆ. ಕಳ್ಳತನ, ದರೋಡೆ ಇವುಗಳಿಗೆ ಹೆಸರಾದ ಊರು ಚಿಕಾಗೋ.

ಚಿಕಾಗೋ ನಗರದಲ್ಲಿ ರಾಕ್‌ಫೆಲರ್ ಮಹಾಶಯ ಕಟ್ಟಿಸಿದ ಅಂತರ ರಾಷ್ಟ್ರೀಯ ಭವನವೊಂದಿದೆ. ಇಲ್ಲಿ ಸುಮಾರು ೫೦ ಜನ ಭಾರತೀಯ ವಿದ್ಯಾರ್ಥಿಗಳಿದ್ದಾರೆ. ಹನ್ನೆರಡು ಜನ ಕನ್ನಡಿಗ ವಿದ್ಯಾರ್ಥಿಗಳಿದ್ದಾರೆ. ನಾವು ಕನ್ನಡಿಗರೆಲ್ಲರೂ ಬೊಂಬಾಯಿನ ಕೈಗಾರಿಕಾ ನಿಪುಣರು ಶ್ರೀ. ಆರ್. ಡಿ. ಚಾರ್‌ರವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದೆವು. ಅಂದು ಬರೀ ಕನ್ನಡದಲ್ಲಿಯೇ ಮಾತನಾಡಿಕೊಂಡು ಮನೆಯ ನೆನಪನ್ನೂ ಮಾಡಿ ಕೊಂಡೆವು. ಶ್ರೀ. ಚಾರ್‌ರವರು ಕನ್ನಡದ ಭಿಕ್ಷಾಪಾತ್ರೆಯನ್ನು ಅಲ್ಲಿಗೂ ಹಿಡಿದುಕೊಂಡು ಬಂದಿದ್ದರು. ಬೊಂಬಾಯಿನ ಮಾತುಂಗಾದಲ್ಲಿರುವ ಕನ್ನಡ ಶಾಲೆಯೊಂದಕ್ಕೆ ಹಣ ಬೇಕೆಂದು ಕೇಳಿದರು. ಕನ್ನಡಿಗರಾದ ನಾವು ಸಂತೋಷದಿಂದ ಒಂದು ನೂರು ರೂಪಾಯಿ ನಿಧಿಯನ್ನು ಎತ್ತಿ ಕೊಟ್ಟೆವು.

ಇಲ್ಲಿ ಬೆಂಗಳೂರಿನ ನಗರ ಸಭೆಯ ಇಂಜಿನಿಯರಾಗಿದ್ದ ಶ್ರೀ. ಮಾಣಿಕ್ಯಂ ಎಂಬುವರು ಮನೆ ಮಾಡಿಕೊಂಡಿದ್ದಾರೆ. ಅವರು "Town Planning" (ನಗರ ನಿರ್ಮಾಣ) ಎಂಬ ವಿಷಯದಲ್ಲಿ ಅಭ್ಯಾಸ ನಡೆ ಸುತ್ತಿದ್ದಾರೆ. ಅವರ ಮನೆಗೆ " ಮೈಸೂರು ಹೌಸ್ " ಎಂದು ನಾಮ ಕರಣ ಮಾಡಿದ್ದಾರೆ.

ಮೈಸೂರಿನವರಾರೇ ಬರಲಿ ಮೈಸೂರಿನ ರಸಕವಳ ಇಲ್ಲಿ ಸಿಕ್ಕು ತ್ತದೆ. ಬಹಳ ದಿನಗಳ ಮೇಲೆ ಇಲ್ಲಿ ನೀರುಳ್ಳಿ ಹುಳಿಯನ್ನು ತಿಂದೆನಯ್ಯ. ಆಲೂಗೆಡ್ಡೆ ಬಜ್ಜಿಯಂತೂ ಎಷ್ಟು ರುಚಿಯಾಗಿತ್ತೋ. ಇದರ ಮುಂದೆ ನಿಮ್ಮ ಟೊಮ್ಯಾಟೊ ರಸಭಟ್ಟ, ಅಕ್ಕಿಯ ರೊಟ್ಟಿ ಎಲ್ಲಿ ಸರಿಸಾಟಿ ಯಾದೀತು !

ಏಪ್ರಿಲ್ ೯ ನೆಯ ತಾರೀಖು ಇಲ್ಲಿ ಮಹಿಳೆಯರ ಸಮ್ಮೇಳನ ವೊಂದು ನಡೆಯಿತು. ಗಾಂಧೀಜಿಯ ಬಗ್ಗೆ ಮಾತನಾಡಬೇಕೆಂದು ನನ್ನನ್ನು ಕೇಳಿಕೊಂಡಿದ್ದರು. ಇಲ್ಲಿಯ ಜನ, ಅದರಲ್ಲೂ ಅಮೇರಿಕದ ಮಹಿಳೆಯರು ಗಾಂಧೀಜಿಯ ಬಗ್ಗೆ ಅಷ್ಟು ಆಸಕ್ತಿ ವಹಿಸುತ್ತಿದ್ದುದನ್ನು ಕಣ್ಣಾರೆ ಕಂಡೆ. ಅಂದಿನ ಸಭೆಯಲ್ಲಿ ನೆರೆದಿದ್ದ ಸಾವಿರಾರು ಮಹಿಳೆಯರು ಉತ್ಸುಕತೆಯಿಂದ ಗಾಂಧೀಜಿಯ ಬಗ್ಗೆ ಹಲವಾರು ಪ್ರಶ್ನೆಗಳನ್ನು ಕೇಳಿ ತಿಳಿದುಕೊಂಡರು.

ಏಪ್ರಿಲ್ ೨೬ನೇ ತಾರೀಖು **ವಾರಂಟ್** ನಗರದ ವಾಣಿಜ್ಯ ಸಂಘ **(Chamber of Commerce)** ದ ವಾರ್ಷಿಕ ಸಭೆಗೆ ಅತಿಥಿಯಾಗಲು ಔತಣವಿತ್ತಿದ್ದಾರೆ. ಅಲ್ಲಿಯೂ ಕೂಡ ಗಾಂಧೀಜಿಯ ಮೇಲೆ ಮಾತನಾಡಬೇಕಂತೆ. ಅಲ್ಲಿಗೆ ಹೋಗಿ ಬಂದನಂತರ ವಿವರವನ್ನು ತಿಳಿಸುತ್ತೇನೆ.

ನನ್ನ ನಾಳೆಯ ಕಾರ್ಯಕ್ರಮದ ಬಗ್ಗೆ ಒಂದು ಮಾತು ಬರೆದಿದ್ದಿ. ಅದರಲ್ಲಿ ನನ್ನ ಶ್ರಮವೇನೂ ಇಲ್ಲ. ದೇವರು ನಡೆಯಿಸಿಕೊಂಡಂತೆ ಆಗುತ್ತದೆ. ನನ್ನ ಜೀವನದಲ್ಲಿ ಬೆರೆತು ಸಹಾಯ ಮಾಡಿ ಬುದ್ಧಿ ಹೇಳಿ, ಆಶ್ರಯ ಕೊಟ್ಟು ನೀತಿ ಹೇಳಿ, ನಕ್ಕು ನಗಿಸಿದ ಕೆಲವು ಸ್ನೇಹಿತರು ನನ್ನನ್ನೆಂದೂ ಕೈಬಿಡಲಾರರೆಂದು ನನ್ನ ನಂಬಿಕೆ. **I have tremendous faith in faith itself.**

ಏಕೋ ಕಾಗದ ಉದ್ದವಾಯಿತು.

ಇತಿ ಹೀಗೆ,

ನಾಕೃಮೂ.

—:o:—

## ಇಪ್ಪತ್ತಾರು

ಬೊಂಬಾಯಿ,
೧೫—೪—೪೮.

ಅಣ್ಣ ನಾಡಿಗ,

ನನ್ನ ಹಿಂದಿನ ಕಾಗದ ಬಂದಿರಬೇಕು. ಮಲೆಯಾಳಿ, ತಮಿಳು ಪತ್ರಿಕೆಗಳ ಬಗ್ಗೆ ಮಾಹಿತಿ ಸಾಕೆ? ಮರಾಠಿಯ ವಿವರಗಳು ಬರುತ್ತವೆ ಬರುತ್ತವೆ, ಎಂದು ಕಾದು ಕಾದು ಬೇಸತ್ತು ಆಸೆಯನ್ನೇ ಬಿಟ್ಟುಬಿಟ್ಟಿರಬೇಕು. ನನಗಾದರೋ ಎಷ್ಟು ಅವಮಾನವಾಗುತ್ತಿದೆ ಗೊತ್ತೆ, ಈ ಮರಾಠಿ ಗೆಳೆಯರು ಮಾತು ಕೊಟ್ಟು ನನಗೆ ಕೈ ಕೊಟ್ಟರು.

ಮೊನ್ನೆ ಹತ್ತನೆಯ ತಾರೀಖಿನ ದಿನ ಯುಗಾದಿ. ನಿನಗೆ ಇದು ಗೊತ್ತಿತ್ತೇನು? ಗೊತ್ತಿತ್ತೊ, ಗೊತ್ತಿರಲಿಲ್ಲವೋ, ಹೊಸ ವರ್ಷದ ಶುಭಾಶಯಗಳನ್ನು ಇಕೋ ತೆಗೆದುಕೊ. ಈ ವರ್ಷದ ಹೆಸರು '**ಸರ್ವಧಾರಿ**' ಎಂದಂತೆ. ನೀನೂ ಸರ್ವಧಾರಿಯಾಗಿರು.

ಇವತ್ತು ನನ್ನ ಹುಟ್ಟಿದ ಹಬ್ಬ, ಎಲ್ಲ ನಿಜವಾದ ಸ್ನೇಹಿತರನ್ನು ನೆನಪು ಮಾಡಿಕೊಳ್ಳುತ್ತಿದ್ದೇನೆ. ಆ ಪಟ್ಟಿಯಲ್ಲಿ ನಿನ್ನ ಸ್ಥಾನ ಮೊದ ಮೊದಲಲ್ಲೇ ಅಲ್ಲವೇ? ೨೪ ಅಪ್ರಯೋಜಕ ವರ್ಷಗಳನ್ನು ಇವತ್ತಿಗೆ ದಬ್ಬಿ ಗೆದ್ದುಕೊಂಡೆ ............

ನಿನ್ನ ವ್ಯಾಸದ ಗೊಂದಲ ಮುಗಿದ ಮೇಲೆ ದೊಡ್ಡದಾಗಿ ಕಾಗದ ಬರಿ.

ಹೀಗೆ, ನಿನ್ನವ,
ಶೌರಿ.

—:o:—

## ಇಪ್ಪತ್ತೇಳು

ಕೊಲಂಬಿಯ,
೨೫—೪—೪೮.

ಚಿರಂಜೀವಿ ಶಾರದಾ ಪ್ರಸಾದ್,

ನೀ ಎಂದು ಕಾಗದ ಬರೆದೆಯೋ ಅಂದೇ ನಾನೂ ಬರೆದೆ. ನನ್ನ ಕಾಗದವೂ ನಿನಗೆ ಇಂದೇ ಮುಟ್ಟಿರಬಹುದು. ತಿಳಿಯದೆಯೇ ನಿನ್ನನ್ನು ಜ್ಞಾಪಿಸಿಕೊಂಡೆನಲ್ಲಾ ನಿನ್ನ ಜನ್ಮದಿನದಲ್ಲಿ. ಗೆಳೆಯರ ಮೇಲೆ ಬೀರಿರುವ ನಿನ್ನ ಪ್ರಭಾವ ಅದು. ೨೪ ವರ್ಷ ಮುಗಿದು ೨೫ ಕ್ಕೆ ಕಾಲಿಟ್ಟೆ. ಚಿರಂಜೀವಿಯಾಗು. ಇದೇ ನಿನ್ನಣ್ಣ ಕೊಡುವ ಉಡುಗೊರೆ. 'ನಿನ್ನ ಬಾಳು ನಾಡಿಗೆ ಬೆಳಕಾಗಲಿ.' ನಮ್ಮ ಬಾಂಧವ್ಯ ಇದೇ ರೀತಿ ನಡೆದು ಬರಲಿ. ಇದೇ ನನ್ನ ಹರಕೆ.

"ವ್ಯಾಸದ ಗೊಂದಲ" ಎಂದಿದ್ದೀ ನೋಡು. ಅದು ನಿಜ. ೫೦ ದಿನಗಳ ಸತತ ಬರೆವಣಿಗೆ, ದುಡಿತ, ಟೈಪು ಮಾಡುವುದು, ನನ್ನ ಜೀವನದ ಸಾರ ಹಿಂಡಿ ಬಿಟ್ಟಿದೆ. ದುಡಿಯುವಾಗ ಅಷ್ಟು ತ್ರಾಸು ಕಾಣಿಸಲಿಲ್ಲ. ಈಗ ಕೈಕಾಲು ಹಿಡಿದುಕೊಂಡು ಬಿಟ್ಟಿವೆ. ಪುಣ್ಯಕ್ಕೆ ನನ್ನ ದೇವರು ಹಾಸಿಗೆ ಹಿಡಿಯುವಂತೆ ಮಾಡಿಲ್ಲ. ವ್ಯಾಸವನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿಯಾಯಿತು. ಅದರ ಮೇಲೆ ಬಾಯಿ ಪರೀಕ್ಷೆ ಮೇ ೨೫ಕ್ಕೆ. ಬರವಣಿಗೆ ಪರೀಕ್ಷೆ ಮೇ ೧೪ಕ್ಕೆ. ಎರಡರಲ್ಲಿಯೂ ತೇರ್ಗಡೆ ಹೊಂದುವ ನಂಬಿಕೆ ಇದೆ. ದೇವರಿದ್ದಾನೆ. ನೀ ಕಳುಹಿಸಿದ ಮರಾಠಿ ಸುದ್ದಿ ನನಗೆ ಮೊದಲೇ ಇನ್ನೊಬ್ಬರಿಂದ ಬಂದಿತ್ತು. ಕೆಲವೊಂದು ವಿಷಯ ಹೆಚ್ಚಿಗೆ ನಿನ್ನಿಂದ ತಿಳಿದೆ.

'ಸರ್ವಧಾರಿ' ನಾಮ ಸಂವತ್ಸರ ನನಗೆ ತಿಳಿಯದೆಯೇ ಬಂದು ಹೋಯಿತು. ಅಂದು ನಾನು **ಜಫರ್‌ಸರ್** ನಗರದಲ್ಲಿ ರಾಜಕೀಯ ಸಭೆಯೊಂದರ ಕಾರ್ಯಕಲಾಪಗಳನ್ನು ಈಕ್ಷಿಸಲು ಹೋಗಿದ್ದೆ. ಮಾರ್ಚಿ

೨೬ ಕ್ಕೆಂದು ತಿಳಿದಿದ್ದೆ. ಸರ್ವಧಾರಿ ನಾನಾಗಬೇಕೆಂದು ನಿನ್ನ ಅಭಿಲಾಷೆಯೇ.

ನಿನ್ನ ಸ್ನೇಹಿತರ ಪಟ್ಟಿಯ ಮೊದಮೊದಲ ಹೆಸರುಗಳಲ್ಲಿ ನನ್ನ ಹೆಸರೂ ಇರುವುದು ಕೇಳಿ ತುಂಬಾ ಸಂತೋಷವಾಗಿದೆ.

ಇನ್ನು ನಲವತ್ತು ದಿನಗಳ ನಂತರ ಅಮೇರಿಕದ "ಎಮ್ಮೆ" ಯಾಗುವೆ. ನಂತರದ ಕಾರ್ಯಕ್ರಮ ಇನ್ನೂ ಗೂಢವಾಗಿಯೇ ಇದೆ. ಎರಡು ಅವಕಾಶಗಳು ತೆರೆದಿವೆ. ಅದರಲ್ಲಿ ಯಾವುದು ಹಿಡಿಯಬೇಕೋ ತಿಳಿದಿಲ್ಲ.

(೧) ಇಂಗ್ಲೇಂಡಿನಲ್ಲಿ ಮೂರು ತಿಂಗಳ ವಿದ್ಯಾಭ್ಯಾಸ. ಇನ್ನೊಂದು ದೇಶದ ಮಾಹಿತಿ ಸಿಕ್ಕುವುದು. ಅಲ್ಲಿರುವ ತನಕ 'ಊಟ ವಸತಿ' ಯ ಗೊಂದಲವಿಲ್ಲ.

(೨) U. N. O. ಕ್ಕೆ ೫೭ ರಾಷ್ಟ್ರಗಳ ಪ್ರತಿನಿಧಿಗಳನ್ನು ತರಬೇತು ಮಾಡುತ್ತಾರೆ. ಜುಲೈ, ಆಗಸ್ಟು ತಿಂಗಳುಗಳಲ್ಲಿ ಆಫೀಸಿನಲ್ಲಿ ತಯಾರಿ ಕೊಟ್ಟು ನಂತರ ಪ್ಯಾರಿಸ್ಸಿಗೆ ಕಳುಹಿಸುತ್ತಾರೆ. ಭಾರತದ ಪ್ರತಿನಿಧಿ ವಿದ್ಯಾರ್ಥಿಯಾಗಿ ರಾಯಭಾರಿ ಅಸಫ್ ಅಲ್ಲಿ ನನ್ನ ಹೆಸರನ್ನು ಶಿಫಾರಸು ಮಾಡಿದಾರೆ. ಅಧಿಕೃತ ಚುನಾವಣೆ ಇನ್ನೂ ಆಗಿಲ್ಲ. ಆದರೂ ಇದೊಂದು ಅವಕಾಶ ಸಿಕ್ಕಿದರೆ ತೆಗೆದುಕೊಳ್ಳಬೇಕೋ ಬೇಡವೋ ? ಇದೊಂದು ಪ್ರಶ್ನೆ.

ಇವೆಲ್ಲವನ್ನೂ ಬಿಟ್ಟು ಪ್ರಭಾವಶಾಲಿಯಾದ ಸ್ವತಂತ್ರ ಭಾರತಕ್ಕೆ ಮರಳಬೇಕೆಂದು. ವೃದ್ಧ ಮಾತಾ ಪಿತೃಗಳನ್ನು ನೋಡಬೇಕು. ಪ್ರಿಯ ಗೆಳೆಯರನ್ನು ಸೇರಬೇಕು. ಹೀಗೆ ನಾನಾ ರೀತಿಯಾಗಿ ತುಮುಲ ಯುದ್ಧ ನಡೆಯುತ್ತಿದೆ. ನಿನ್ನ ಸಲಹೆಯೇನು ?

ನನ್ನ ಆರ್ಥಿಕ ಸ್ಥಿತಿ ಕೆಡುತ್ತ ನಡೆದಿದೆ. ತಂದ ಹಣ ಮುಗಿಯಿತು. ಈಗ ದಿನವೂ ಒಂದು ಘಂಟೆ ಕೆಲಸ ಮಾಡಿ ತಿಂಗಳಿಗೆ ೪೫ ಡಾಲರು

ಸಂಪಾದಿಸುತ್ತಿದ್ದು ಹೊಟ್ಟೆ ಹೊರೆದುಕೊಳ್ಳುತ್ತಿದೇನೆ. ಇದಕ್ಕೆ ಜೊತೆ ಯಾಗಿ ಆಗಾಗ್ಗೆ ಭಾಷಣಗಳಿಗೆ ೧೦, ೧೫, ೨೦ ಡಾಲರು ಸಿಕ್ಕುತ್ತದೆ. ಮೇ ೨ಕ್ಕೆ **ಸ್ಲೇಟರ್** ನಗರದಲ್ಲಿ ೧೨ ಚರ್ಚುಗಳು ಒಟ್ಟಿಗೆ ಸೇರಿ ಗಾಂಧೀಜಿಯ ಬಗ್ಗೆ ಗೌರವ ಸೂಚಿಸುತ್ತಾರೆ. ಗಾಂಧೀಜಿಯ ಭಾವಚಿತ್ರ ಅನಾವರಣ ಮಾಡಬೇಕೆಂದು ನನ್ನನ್ನು ಆಹ್ವಾನಿಸಿದಾರೆ. ಹೋಗುವೆ. ಆ ಯೋಗ್ಯತೆ ನನಗಿದೆಯೇ ? ಆ ಮಹಾನುಭಾವನ ಪ್ರಭಾವ. ಪುಸ್ತಕದ ಬಗ್ಯೆ ೨೦೦ ಡಾಲರು ಪೈಕಿ ೧೦೦ ಡಾಲರು ಕೈಗಿತ್ತಿದ್ದು ಅದನ್ನು ನನ್ನ ವ್ಯಾಸಕ್ಕೆ ಟೈಪು ಮಾಡಲು ಉಪಯೋಗಿಸಿದೆ. ಇನ್ನೂ ೧೦೦ ಡಾಲರು ನಾ ಇಲ್ಲಿಂದ ಮರಳುವಾಗ್ಗೆ ಕೊಡುತ್ತಾರೆ. ಅದು ನ್ಯೂಯಾರ್ಕಿಗೆ ಇಲ್ಲಿಂದ ತೆರಳಲು ದಾರಿಯ ಖರ್ಚಾಗುವುದು. ಅಲ್ಲಿಂದ ಭಾರತಕ್ಕೆ ಬರಲು ೫೦೦ ಡಾಲರು ಬೇಕು. ಹೇಗೆ ಮಾಡಲಿ ?

ನನ್ನ ಪುಸ್ತಕದ ಗ್ಯಾಲಿ ಪ್ರೂಫ್ ತಿದ್ದುವಿಕೆ ನಿನ್ನೆಗೆ ಮುಗಿದು ನಾಳೆಯಿಂದ ಪೇಜ್ ಪ್ರೂಫ್ ಪ್ರಾರಂಭ. ಮೇ ಗೆ ಮುಗಿಯುವುದು. ೧೯೪೬ ನೇ ಮೇ ೧ ಕ್ಕೆ "ಬಾಪು ದರ್ಶನ" ಬರೆದು ಪ್ರಕಟಿಸಿದ್ದೆ. ಈ ಮೇ ಗೆ "ಬಾಪು ಅಂತ್ಯ ದರ್ಶನ" ದ ಚಿತ್ರ. ಹೋ! ಅದೆಷ್ಟು ಬದಲಾವಣೆ ಪ್ರಪಂಚದಲ್ಲಿ.

ಅದೇನಪ್ಪಾ! ಅಷ್ಟು ಕೋಪ ನನ್ನ ಮೇಲೆ ಸಂಜೀವನಿಗೆ, ನನ್ನ ಅಪರಾಧವೇ ತಿಳಿಯಲೊಲ್ಲದು. ಮೂರು ತಿಂಗಳಾಯಿತು ಒಂದಾದರೂ ಕಾಗದವೇ ಇಲ್ಲ. ಪಾಪ! ಬಿಡುವೇ ಇಲ್ಲವೇನೋ? ಕೃಷ್ಣಕುಂಜದ ಕಣ್ವ ಋಷಿಗಳು ತಪಸ್ಸು ಮಾಡುತ್ತಿಲ್ಲ ತಾನೆ. ಹೃದಯ ಮನಸ್ಸು ತುಂಬಿದ ಆ ಕೊಡವೂ ಬಿರುಕು ಬಿಡಬೇಕೆ. ಅದು ಸಲ್ಲದು ಎಂದು ಸಂಜೀವನಿಗೆ ತಿಳಿಸಿ ಕೂಡಲೇ ಈ ದಡದಾಚೆ ತಪಿಸುತ್ತಿರುವ — ತಪಸ್ಸು ಮಾಡುತ್ತಿರುವ ಗೆಳೆಯನ ಕಡೆಗೆ ಲಕ್ಷ್ಯ ಕೊಡಬೇಕೆಂದು ತಿಳಿಸು.

ದೊಡ್ಡ ಕಾಗದ ಬರಿ ಎಂದು ಬರೆದಿದ್ದಿ. ನೀ ಮಾತ್ರ ಆ ಸೀಲಿ ಚೀಟಿಯಲ್ಲೇ ಮುಗಿಸಿ ಬಿಡುತ್ತೀ. ನನಗಂತೂ ಅದೆಷ್ಟು ವಿಷಯ

ತಿಳಿದುಕೊಳ್ಳಬೇಕೆಂದು ಆಸೆ ಇರುತ್ತದೋ. ನಿನ್ನ ಕಾಗದ ಬಂದೊಡನೆ ನಿಮಿಷಕ್ಕೆ ಓದಿ ಮುಗಿಸಿಬಿಡುತ್ತೇನೆ. ಅನಂತರ? ನಿನ್ನ ಮುಂದಿನ ಕಾಗದ ವಿರಾಮ ತೆಗೆದುಕೊಂಡು — ಈ ಎರಡು ತಾಸು ನಾಡಿಗನ ಕಾಗದಕ್ಕಾಗಿ— ಎಂದು ಬಗೆದು ಮಾರುದ್ದ ಕಾಗದ ಬರೆ.—ರಾಜಕೀಯ — ಸ್ನೇಹಿತರು — ಕೃಷ್ಣಕುಂಜ — ಮೈಸೂರು — ಕರ್ನಾಟಕ — ಮನೆ — ಮಾರು — ತಂದೆ ತಾಯಿಯರು — ಮೋಹನ — ರಾಜು ಎಲ್ಲರ ಬಗ್ಗೆ ಸವಿಸ್ತಾರ ಕಾಗದ ಬರೆ.

ಈ ಕಾಗದ ಮುಟ್ಟುವ ವೇಳೆಗೆ ಮೇ ತಿಂಗಳು ಬಂದುಬಿಡುತ್ತದೆ. ಅನಂತರ ಜೂನ್ ಅಲ್ಲವೇನೋ?

ಇನ್ನೊಮ್ಮೆ ಪುನಃ ಬರೆಯುವೆ, ಶೌರಿ! ಅಂತೂ ಮುಂದಿನ ವರ್ಷ ನಿನ್ನ ಬೆಳ್ಳಿಯ ಹಬ್ಬ.

ಇತಿ ಹೀಗೆ,

ನಾಕೃಮೂ.

—:o:—

## ಇಪ್ಪತ್ತೆಂಟು

ಕೊಲಂಬಿಯ,

೩–೫–೪೮.

ಪ್ರಿಯ ಶೌರಿ :—

ಈ ಕಾಗದದಲ್ಲಿ ನಿನಗೆ ಇನ್ನೇನೇನನ್ನೂ ಬರೆಯದೆ **ವಾರಂಟನ್** ಮತ್ತು **ಸ್ಲೇಟರ್** ನಗರದಲ್ಲಿ ಗಾಂಧೀಜಿಯ ಬಗ್ಗೆ ನಡೆದ ಸಭೆಗಳನ್ನು ವಿವರಿಸುತ್ತೇನೆ.

ಅಂದು ಬೆಳಿಗ್ಗೆ ನಮ್ಮ ಮನೆಗೊಂದು ಕಾರು ಬಂದಿತು. ನಡು ವಯಸ್ಸಿನ ಅಮೇರಿಕನ್ ಗಂಡ ಹೆಂಡಿರು ಅದರಲ್ಲಿ ಕುಳಿತಿದ್ದರು. ಆತ ಕಾರಿನಿಂದಿಳಿದು "ಹಲೋ! ಮಿ॥ ಮೂರ್ತಿ, ಕುಶಲವೋ? ನಿಮ್ಮನ್ನು ನೋಡಿದುದು ತುಂಬಾ ಹರ್ಷದ ಸಂಗತಿ ಎಂದರು," ಇವರ ಹೆಸರು

**ಮಿ॥ ಫ್ರ್ಯಾಂಕ್ ಹೋಲ್ಮನ್** ಎಂದು. ಕೊಲಂಬಿಯಾಕ್ಕೆ ೬೦ ಮೈಲಿ ದೂರದಲ್ಲಿರುವ ವಾರಂರ್ಟ ಎಂಬ ನಗರದಲ್ಲಿ **"ವಾರಂರ್ಟ ಬ್ಯಾನರ್"** ಎಂಬ ದಿನಪತ್ರಿಕೆಯ ಸಂಪಾದಕರು, ಅಲ್ಲಿಯ ವಾಣಿಜ್ಯಸಂಘದ ಕಾರ್ಯದರ್ಶಿ, ನನ್ನನ್ನು ಆಗಲೇ ಕರೆದುಕೊಂಡು ಹೋದರು.

೬ ಗಂಟೆಗೆ ಸರಿಯಾಗಿ ಸಭೆ ಸೇರಿತು. ಮೊದಲು ಊಟವಾಯಿತು. ನಾನು ಮಾಂಸವನ್ನು ತಿನ್ನುವುದಿಲ್ಲವೆಂದಾಗ ಅವರಿಗೆಲ್ಲ ಆಶ್ಚರ್ಯವಾಯಿತು. 'ಹಾಗಾದರೆ ನೀವೇನು ಊಟ ಮಾಡುವಿರಿ?' ಎಂದು ಉದ್ಗಾರ ತೆಗೆದರವರು. ಈ ಉಪಚಾರದ ಮಾತುಗಳೆಲ್ಲಾ ಆದ ನಂತರ ನಾನು 'ಗಾಂಧೀಜಿ'ಯ ಬಗ್ಗೆ ೧॥ ಗಂಟೆಕಾಲ ಮಾತನಾಡಿದೆ. ಸದ್ದಿಲ್ಲದೆ, ಒಬ್ಬರೂ ಪಿಟಕ್ಕೆನ್ನದೆ ಕೇಳುತ್ತ ಕುಳಿತಿದ್ದರು. ಸಭೆಯಿಂದ ಮಧ್ಯದಲ್ಲಿ ಒಬ್ಬರಾದರೂ ಹೊರಬೀಳಲಿಲ್ಲ. ಸುಮಾರು ಎರಡು ಗಂಟೆಗಳ ಕಾಲ, ನನ್ನ ಭಾಷಣವಾದ ಮೇಲೆ ಆ ಸಭಿಕರು, ಭಾರತ, ಗಾಂಧೀಜಿ, ಅಹಿಂಸೆ, ರೋಪ್ ಟ್ರಿಕ್, ಮದುವೆ, ಜಾತಿಪದ್ಧತಿ ಮುಂತಾದವುಗಳ ಮೇಲೆ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿದರು.

ನಮ್ಮ ಸಭೆ ಮುಗಿದಾಗ ರಾತ್ರಿ ಹನ್ನೊಂದಾಗಿತ್ತು. ಬರುವಾಗ ಬಸ್ಸಿನಲ್ಲಿಯೇ ಬಂದೆ. ಕೊಲಂಬಿಯಾಕ್ಕೆ ನನ್ನನ್ನು ಬೀಳ್ಕೊಡಲು ಆ ಜನರೆಲ್ಲಾ ಬಸ್ ಸ್ಟ್ಯಾಂಡಿನ ವರೆಗೆ ಬಂದರು. ಅಷ್ಟರಲ್ಲಿಯೇ ಹಲವರು ಹಣ್ಣು ಹಂಪಲುಗಳನ್ನು ತಂದು ನನಗೆ ಕೊಟ್ಟರು. ಬಸ್ಸು ನಿಲ್ದಾಣ ಬಿಡುವುದಕ್ಕೆ ಇನ್ನೇನು ೫ ನಿಮಿಷವಿತ್ತು. ಕಾರ್ಯದರ್ಶಿ ಹೋಲ್‌ಮನ್ ಒಂದು ಲಕೋಟೆಯಲ್ಲಿ ಒಂದುನೂರು ಡಾಲರುಗಳನ್ನು (೩೫೦ ರೂ.) ಇಟ್ಟು 'ಇದೇ ನಮ್ಮ ಅಲ್ಪ ಕಾಣಿಕೆ ನಿಮ್ಮ ಶ್ರಮಕ್ಕೆ. ಇದಕ್ಕಿಂತ ಹೆಚ್ಚು ಕೊಡಲು ಅಶಕ್ಯರು, ಸ್ವೀಕರಿಸಬೇಕು.' ಎಂದರು. ಹೋ! ಅದೊಂದು ನೂತನ ಅನುಭವ ನನಗೆ. ಕಾರಿನಲ್ಲಿ ಕರೆದುಕೊಂಡು ಬಂದು ಊಟಕ್ಕೆ ಹಾಕಿ, ತಿಂಡಿಕೊಟ್ಟು, ಭಾಷಣಮಾಡಿಸಿ, ಮೇಲೆ ೧೦೦ ಡಾಲರು ಕೊಟ್ಟು ಕಳುಹಿಸುವುದು ಆಶ್ಚರ್ಯವಲ್ಲವೇ!

ಮೇ ೨ ನೆಯ ತಾರೀಖು ಕೊಲಂಬಿಯದಿಂದ ನೂರುಮೈಲಿ ದೂರ ದಲ್ಲಿದ್ದ **ಸ್ಲೇಟರ್** ಎಂಬ ನಗರಕ್ಕೆ ಹೋಗಿದ್ದೆ. ಅಲ್ಲಿದ್ದ ಹನ್ನೆರಡು ಚರ್ಚುಗಳೂ ಸೇರಿ ತಮ್ಮ ಭಾನುವಾರದ ಪ್ರಾರ್ಥನಾ ಸಭೆಯನ್ನು ಒಂದೇಕಡೆ ಸೇರಿಸಿದರು. ಅಂದು " ಗಾಂಧೀಜಿಯ ಸಂದೇಶ " ಹೇಳ ಬೇಕೆಂದು ನನ್ನನ್ನು ಕರೆಯಿಸಿದ್ದರು. ಅವರ ತೀವ್ರಾಸಕ್ತಿಯನ್ನು ಕಂಡು ನಾನು ಆ ಊರಿನ ಚರ್ಚಿಗೆ ಒಂದು 'ಗಾಂಧೀಜಿ'ಯ ಭಾವಚಿತ್ರ ವನ್ನು ಕೊಟ್ಟೆ. ಅದರ ಅನಾವರಣ ಮಹೋತ್ಸವವು ಅಂದೇ ಆಯಿತು. ಈ ಸಭೆಗೆ ರೋಮನ್ ಕ್ಯಾಥೊಲಿಕರು ಮತ್ತು ಪ್ರಾಟೆಸ್ಟೆಂಟ್ ಪಂಥ ದವರೂ ಬಂದಿದ್ದರು. ಗಾಂಧೀಜಿ ಬಗ್ಗೆ ನಾ ಹೇಳಿದ ಮಾತುಗಳನ್ನು ಸಾವಧಾನವಾಗಿ ಕೇಳಿದರು. ಸಂದೇಹ ಬಂದೆಡೆಗಳಲ್ಲಿ ಪ್ರಶ್ನೆಗಳನ್ನು ಕೇಳಿ ಆಸಕ್ತಿಯಿಂದ ಕುತೂಹಲದಿಂದ ತಿಳಿದುಕೊಳ್ಳುತ್ತಿದ್ದರು. ಅಂದಿನ ಸಭೆಯಲ್ಲಿ ಕಳೆಕೊಟ್ಟದ್ದು ಚರಕಾಪ್ರದರ್ಶನ. ನೂಲುವ ರೀತಿಯನ್ನು ಅವರು ನೋಡಿದಾಗ ತೋರಿಸಿದ ಸಂತುಷ್ಟತೆ ಅಷ್ಟಿಷ್ಟಲ್ಲ. ಗಾಂಧೀಜಿ ಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಅದೂ ಸಹಾಯಮಾಡಿರಬೇಕು.

ಈ ಸಭೆಯನ್ನು ಏರ್ಪಡಿಸಿದವರ ಬಗ್ಗೆ ನಾಲ್ಕು ಮಾತುಗಳನ್ನು ಆಡಲೇಬೇಕು. ಇವರು **ಶ್ರೀ ಮತ್ತು ಶ್ರೀಮತಿ ಮೆಲ್ವಿನ್ ಸ್ಪ್ರೈಡ್‌ರು,** ಅಪ್ರತಿಮ ಗಾಂಧೀ ಭಕ್ತರು. ಗಾಂಧೀಜಿಯ ಬಗ್ಗೆ ಸಾಕಷ್ಟು ಓದಿದ್ದಾರೆ. ನೀಗ್ರೋ, ಸಮಸ್ಯೆಯನ್ನು ಬಿಡಿಸುವುದರಲ್ಲಿ ಇವರು ಹೆಚ್ಚು ಆಸಕ್ತಿ ವಹಿ ಸಿರುತ್ತಾರೆ. ಭಾರತದಿಂದ ಪವಿತ್ರವಾದದ್ದು ಏನಾದರೊಂದು ವಸ್ತುವನ್ನು ಕಳುಹಿಸಬೇಕೆಂದು ಗಾಂಧೀಜಿಯವರ ಮೊಮ್ಮಕ್ಕಳೊಬ್ಬರಿಗೆ ಕಾಗದ ಬರೆದಾಗ ಅವರಿಗೆ ಗಾಂಧೀಜಿಯ ಚಿತೆಯಭಸ್ಮವನ್ನು ಕಳುಹಿಸಿಕೊ ಟ್ಟರು. ಗಾಂಧೀಜಿಯ ಮೊಮ್ಮಕ್ಕಳಿಂದ ಹಾಗೆ ಅದನ್ನು ಹೊಂದಿದ ಅಮೇರಿಕನ್ನರಲ್ಲಿ ಅವರೇ ಮೊದಲಿಗರು.

ಶ್ರೀ ಮೇಲ್ವಿನ್‌ರಿಗೆ ಕೊಲಂಬಿಯಾ ಕೋರ್ಟೊಂದರಲ್ಲಿ ಕೆಲಸ, ಶ್ರೀಮತಿಯವರು ಅಲ್ಲಿಯ ಹೆಂಗಸರ ಕಾಲೇಜಿನಲ್ಲಿ ಅಧ್ಯಾಪಿಕೆ. ಇಬ್ಬರೂ

ತುಂಬಾ ಸರಳ ಸ್ವಭಾವಿಗಳು. ಇವರು ಗಾಂಧೀಜಿಯನ್ನು ನೆನಸದ ದಿನವಿಲ್ಲ. ಇವರ ಸ್ವಂತ ಊರೇ ಸ್ಲೇಟರ್. ಅಲ್ಲವರು ಗಾಂಧೀಜಿಯ ನಿಶಾನೆಯನ್ನೇರಿಸಿದ್ದಾರೆ.

ನೋಡಿದೆಯ, ಅಮೇರಿಕನ್ನರ ಗಾಂಧೀ ಭಕ್ತಿ. ಇಷ್ಟು ಸಾಕು ಇಂದಿಗೆ.

ಇತಿ ಹೀಗೆ,

ನಾಕೃಮೂ.

—:o:—

## ಇಪ್ಪತ್ತೊಂಭತ್ತು

ಕೊಲಂಬಿಯಾ,

೨೨—೫—೪೮.

ಸಂಜೀವ :

ನಿನ್ನಿಂದ ಕಾಗದವೇ ಇಲ್ಲವಲ್ಲಾ. ಕೋಪವೇನು? ಮೊನ್ನೆ ನನ್ನ ಪರೀಕ್ಷೆ ಮುಗಿಯಿತು. ಚೆನ್ನಾಗಿ ಮಾಡಿದ್ದೇನೆ. ಗಾಂಧೀಜಿಯ ಮೇಲೆ ಬರೆದ ಪುಸ್ತಕವೂ ಪ್ರಕಟವಾಯಿತು. ಶೌರಿಗೆ ವಿಮಾನದ ಮೂಲಕ ಒಂದು ಪ್ರತಿ ಕಳುಹಿಸಿಕೊಟ್ಟಿದ್ದೇನೆ. ನಿನಗೆ ಅವನು ತೋರಿಸಿರಬಹುದು.

ನಿನ್ನ ಆಶ್ರಮ ಬಿಡುವಾಗ ನೀನು ಎರಡು ಕರಾರುಗಳನ್ನು ನನಗೆ ಹಾಕಿದ್ದೆ ನೋಡು. ನಾನು ಡಿಗ್ರಿ ಪಡೆದುಕೊಂಡು ಬರುವುದೊಂದು, ಪುಸ್ತಕವನ್ನು ಪ್ರಕಟಿಸುವುದಿನ್ನೊಂದು. ಎರಡನ್ನೂ ಸಾಧಿಸಿದೆ. ಇನ್ನು ಭಾರತಕ್ಕೆ ಮರಳಬಹುದಷ್ಟೆ.

ಪ್ರೀತಿ ಇರಲಿ.

ನಿನ್ನವ,

ನಾಕೃಮೂ.

—:o:—

## ಮೂವತ್ತು

ಕೊಲಂಬಿಯ,
೨೨-೫-೪೮.

ಚಿ|| ಶೌರಿ :

ಹದಿನೆಂಟು ತಿಂಗಳ ಅಮೇರಿಕೆಯ ಪ್ರವಾಸದ ಕೊನೆಯಲ್ಲಿ ನನ್ನ ಕಾಣಿಕೆಯಾಗಿ ದೇಶಕ್ಕೆ ಅರ್ಪಿಸಿದ ನನ್ನ ಸೇವೆಯಿದು. ಕನ್ನಡಿಗರ ಬೆಂಬಲದಿಂದ ಇಲ್ಲಿಗೆ ಬಂದು ನನ್ನ ದೇಶದ ಬಗ್ಗೆ ನಾನು ಸ್ವಲ್ಪವಾದರೂ ಸೇವೆ ಸಲ್ಲಿಸಿದೆನಲ್ಲಾ ಎಂಬ ತೃಪ್ತಿ ನನಗಾಗಿದೆ. **ಪಂಡಿತ ಜವಹರ ಲಾಲ್ ನೆಹರೂರವರು** ತಾವು ಬಾಪುವಿನ ಮೇಲೆ ಬರೆದ ಲೇಖನವೊಂದನ್ನು ನನ್ನ ಪುಸ್ತಕದಲ್ಲಿ ಮುನ್ನುಡಿ ಲೇಖನವನ್ನಾಗಿ ಸೇರಿಸಿಕೊಳ್ಳಲು ಕೇಬಲ್ ಮೂಲಕ ಅನುಮತಿ ಯಿತ್ತರು. ಅದೇ ನನ್ನ ಪುಸ್ತಕದ ಭಾಗ್ಯ ನಿಧಿ. **ಶ್ರೀ. ದಿವಾಕರರು** ಮುನ್ನುಡಿಯೊಂದನ್ನು ಮೊದಲೇ ಕಳುಹಿಸಿಕೊಟ್ಟಿದ್ದರು. ಅದು ನನ್ನ ಪುಣ್ಯ.

ಈ ಪುಸ್ತಕದ ಬಗ್ಗೆ ನಿನ್ನ ಅಭಿಪ್ರಾಯವೇನು ತಿಳಿಸು.

ಇಲ್ಲಿಗೆ ೪೦ ಮೈಲಿ ದೂರದಲ್ಲಿರುವ **ಮೋರ್ಕ** ಎಂಬ ನಗರಕ್ಕೆ ೨೫ ನೆಯ ತಾರೀಖು ಗಾಂಧೀಜಿಯ ಬಗ್ಗೆ ಭಾಷಣ ಮಾಡಲು ಅಲ್ಲಿಯ ನಗರಾಧ್ಯಕ್ಷರ ಔತಣದ ಮೇರೆಗೆ ಹೊರಡುವವನಿದ್ದೇನೆ. ವಿವರ ಆಮೇಲೆ ತಿಳಿಸುವೆನು.

ಪ್ರೀತಿಯಿರಲಿ.

ಇತಿ ಹೀಗೆ,
ನಾಕೃಮೂ.

—:o:—

## ಮೂವತ್ತೊಂದು

ಬೊಂಬಾಯಿ,
೨೪—೫—೪೮.

ಅಣ್ಣ ನಾಡಿಗ:

ನಿನಗೆ ಬಹಳ ದಿನಗಳಿಂದ ಕಾಗದ ಬರೆಯಬೇಕಾದ್ದು ಬಾಕಿಯಿಟ್ಟುಕೊಂಡಿದ್ದೇನೆ. ಹಾಗೆಂದು ಬಹಳ ದೊಡ್ಡ ಕಾಗದ ಬರೆಯುತ್ತೇನೆಂದಲ್ಲ. ಬರೆಯದಿದ್ದುದಕ್ಕೆ ಕಾರಣವಿಷ್ಟೆ. ಸೋಮಾರಿತನ.

ಹತ್ತು ದಿನದ ಹಿಂದೆ ನಿಮ್ಮ ಬರವಣಿಗೆ ಪರೀಕ್ಷೆ ಮುಗಿದಿರಬೇಕು. ನಾಳೆಯ ದಿನ ಬಾಯಿ ಪರೀಕ್ಷೆಯೂ ಮುಗಿಯುತ್ತದೆ. ಈ ಪರೀಕ್ಷೆ ಮುಗಿದೊಡನೆ ನಿನ್ನ ಹೆಗಲಿಂದ ಭಾರಿ ಹೊರೆ ಇಳಿದಂತಾಗುತ್ತದೆ. ನನಗೆ ಗೊತ್ತು ಆ ಭಾವನೆ ಹೇಗಿರುತ್ತದೆಂದು............ ಅಲ್ಲದೆ ನಿನ್ನ ಸಂದರ್ಭದಲ್ಲಿ ಆ ಭಾವನೆ ಹೆಚ್ಚು ತುಂಬಿರುತ್ತದೆ. ಹತ್ತು ಸಾವಿರ ಮೈಲಿಗಳ ದೂರ ಬಂದ ಉದ್ಯಮ, ಎರಡು ವರ್ಷಗಳ ಕಾಲ ಪಟ್ಟ ಶ್ರಮ ಸಾರ್ಥಕವಾಯಿತೆಂದು ಮನಸ್ಸಿಗೊಂದು ನೀರವ, ಶಾಂತಿ ಇಳಿದು ಬಂದಂತಿರುತ್ತದೆ. ಆದರೆ ಈ ಶಾಂತಿಯ ಹಿಂದೆ ಒಂದು ಬಗೆಯ ತೆರವೂ, ಬರಿತನವೂ ಇರುತ್ತವೆ. ಈ ಕೆಲಸ ಮುಗಿದಂತಾಯಿತು — ಮುಂದೇನು ಮಾಡೋಣ, ಈ ಬಂಧ ತೊರೆಯಿತಿನ್ನು, ಹೊಸ ಯಾವ ನೇಗಿಲಿಗೆ ಗೋಣೊಡ್ಡೋಣ ಎಂಬ ಚಡಪಡವೂ ಇರುತ್ತದೆ. **ಗಿಬ್ಬನ್‌ಗೆ, Decline and Fall of Roman Empire** ಬರೆಯಲು ಹದಿಮೂರು ವರ್ಷವೋ ಇಪ್ಪತ್ತು ವರ್ಷವೋ ಹಿಡಿಯಿತಂತೆ. ಕೊನೆಯ ದಿನ ಕೊನೆಯ ಅಧ್ಯಾಯದ ಕೊನೆಯ ವಾಕ್ಯ ಬಂಧದ ಕೊನೆಯ ಸಾಲು ಬರೆದು ಮುಗಿಸಿದಾಗ ಏನು ಭಾವನೆಗಳು ಬಂದುವೆಂದು ಅವನು ತನ್ನ ಆತ್ಮ ಚರಿತ್ರೆಯಲ್ಲಿ ವರ್ಣಿಸಿದ್ದಾನೆ. ತನ್ನ ಬಾಳಿನ ಉದ್ದಿಶ್ಯ ಮುಗಿದು ಹೋಯಿತಲ್ಲಾ ಎನಿಸಿತಂತೆ. ಯಾವುದೊಂದು ದೊಡ್ಡ ಸನ್ನಾಹ ಮುಗಿದೊಡನೆಯೂ ಈ ಭಾವನೆಯ ಒಂದು ಅಂಶ ತೋರುತ್ತದೆ, ಅಲ್ಲವೇ?

## ನಮ್ಮ ಕಾಗದಗಳು

ಸಂಜೀವ ತನ್ನ ಒಂದು ತಿಂಗಳಿನ ರಜೆಯನ್ನು ಮುಗಿಸಿಕೊಂಡು ಐದಾರು ದಿನಗಳ ಹಿಂದೆ ಹಿಂದಿರುಗಿದ. ಬೇರೆ ಯಾವ ಸ್ನೇಹಿತರ ಬಗ್ಗೆ ಏನು ಹೇಳಲಿ? ಅನಂತ, ಅಡಿಗ, ಪುಸ್ತಕಗಳನ್ನು ಬರೆಯುತ್ತಿದ್ದಾರೆ. ಕಿಟ್ಟಿ, ವರದ ಮೈಸೂರಲ್ಲೇ. ಪಿ. ಜಿ. ಗೆ ಇನ್ನು ಮೂರು ದಿನಕ್ಕೆ ಮದುವೆ.

ರಾಜಕೀಯ: ಭಾರತದಲ್ಲೀಗ ನಾಲ್ಕು ರಾಜಕೀಯಗಳು. (೧) ಕಾಶ್ಮೀರ ಯಾವ ಘಟ್ಟದಲ್ಲಿದೆಯೆಂದು ನಿನಗೆ ಗೊತ್ತು. (೨) ಹೈದರಾಬಾದು, ಬಿಸಿ ವಿಪರೀತವಾಗಿದೆ. ಇಂದು ಬೊಂಬಾಯಿ, ಮದರಾಸು ರೈಲಿನ ಮೇಲೆ ಹೈದರಾಬಾದು ನಿಜಾಮನ ಗುಂಡುಗಳು ಧಾಳಿ ನಡೆಸಿದ್ದರಿಂದ ಎಲ್ಲ ರೈಲುಗಳನ್ನೂ ನಿಲ್ಲಿಸಿಬಿಟ್ಟಿದ್ದಾರೆ. ಇನ್ನೊಂದು ವಾರದಲ್ಲಿ ಏನೋ ನಡೆಯುತ್ತದೆ. ಅದು ಖಂಡಿತ. (೩) ಮೂರನೆಯ ರಾಜಕೀಯ ಅನ್ನದ್ದು, ಬಟ್ಟೆಯದು. ಜನರ ಆತಂಕಗಳು ಹೆಚ್ಚುತ್ತಿವೆ. ನಮ್ಮದಾಗಿರುವ ಜನತಾ ಸರ್ಕಾರಗಳು ಈ ವಿಷಯದಲ್ಲಿ ಅಲಕ್ಷ್ಯ ಮಾಡಲು ಸಾಧ್ಯವಿಲ್ಲ. (೪) ಕಮ್ಯು—ಅನಿಷ್ಟರು, ಅವರ ಕಾಟ ಇನ್ನು ಮುಂದೆ ತಡೆಯಲಾಗದಾದೀತು.

ಈ ನಾಲ್ಕು ಮುಖ್ಯ ರಾಜಕೀಯ ಘಟಕಗಳಿಗೆ ಹೋಲಿಸಿದರೆ ಭಾರತದಲ್ಲಿ ಬೇರೊಂದು ಮುಖ್ಯ ಸಮಸ್ಯೆಯಿಲ್ಲವೆನ್ನಬಹುದು.

ಇನ್ನು ಕರ್ಣಾಟಕ ಪ್ರಾಂತ್ಯದ ನಿರ್ಮಾಣವಂತೂ ಇಷ್ಟರಲ್ಲೇ ಆಗುವಂತೆ ಕಾಣಲಿಲ್ಲ. ಆದಕ್ಕೆ ಕಲ್ಲುಹಾಕಿದವರಾರು ಗೊತ್ತೆ? ನಿನಗೇ ಗೊತ್ತಿದೆಯಲ್ಲ, ವಿವರಿಸಿ ಬಹಿರಂಗ ಮಾಡುವುದೇಕೆ? ಬಹಳ ಜಿಪುಣತನದಿಂದ, ಸ್ವಾರ್ಥದಿಂದ, ಸುಳ್ಳುತನದಿಂದ, ಕಪಟದಿಂದ ನಡೆದುಕೊಂಡು ಅಖಿಲ ಕರ್ಣಾಟಕದ ವಿಶಾಲ ಯೋಜನೆಯನ್ನು ಬದಿಗಿಟ್ಟಂತಾಗಿದೆ. ನಾವು ಮೈಸೂರವರು ಎಂದು ಮಿಕ್ಕ ಕನ್ನಡಿಗರೊಂದಿಗೆ ಹೇಳಿಕೊಳ್ಳಲು ನಾಚಿಕೆಯಾಗುತ್ತಿದೆ.

ನಿನ್ನ ಮಿಕ್ಕ ಕಾರ್ಯಕ್ರಮಗಳೆಲ್ಲಾ ಏನಾದುವು? ಭಾರತ ಸರ್ಕಾರದ ವೇತನವನ್ನು ನಿರೀಕ್ಷಿಸಿ ಯು. ಎನ್. ಒ. (U.N.O.) ಗೆ ಹೋಗುವುದಕ್ಕಿಂತ ಇಂಗ್ಲೆಂಡಿಗೆ ಹೋಗುವ ಯೋಚನೆಯೇ ಎಲ್ಲಕ್ಕಿಂತ ಶ್ರೇಷ್ಠ.

ಇನ್ನೇನು ಬರೆಯಲಿ.

ಹೀಗೆ,

ಶೌರಿ.

—:o:—

## ಮೂವತ್ತೆರಡು

ಕೊಲಂಬಿಯಾ,

೨೬—೫—೪೮.

ಚಿ|| ಶೌರಿ :

ನನ್ನ ಹಿಂದಿನ ಕಾಗದ ತಲಪಿರಬಹುದು. ಮೇರ್ಕ ನಗರದ ಸಭೆಯ ವಿಷಯ ಬರೆಯುತ್ತೇನೆಂದು ತಿಳಿಸಿದ್ದೆನಷ್ಟೆ. ನಿನ್ನೆ ರಾತ್ರಿ ಮೇರ್ಕ ನಗರದಿಂದ ನಾ ಮನೆಗೆ ಬಂದಾಗ ರಾತ್ರಿ ೧೨ ಘಂಟೆ ಆಗಿತ್ತು. ಆ ನಗರದಲ್ಲಿ ನನಗೆ ಕೊಟ್ಟ ಅಭೂತ ಪೂರ್ವಕ ಸ್ವಾಗತವನ್ನು ನಾ ಎಂದೂ ಮರೆಯುವಂತಿಲ್ಲ. ಆ ಸ್ವಾಗತ ನನಗೆಂದು ನಾನೆಂದೂ ತಿಳಿದುಕೊಂಡಿಲ್ಲ. ಯಾವ ದೇಶವನ್ನು ನಾನು ಇಲ್ಲಿ ಪ್ರತಿನಿಧಿಸಿದ್ದೇನೋ ಆ ದೇಶಕ್ಕೆ ಈ ಗೌರವ.

ಮೇರ್ಕ ನಗರ ರೈತರ ನಗರ. ಮನೆಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಚದುರಿವೆ. ಒಬ್ಬೊಬ್ಬರು ಎರಡೆರಡು ಫರ್ಲಾಂಗ್ ದೂರದಲ್ಲಿ ವಾಸವಾಗಿದ್ದಾರೆ. ಅವರ ಮನೆಯ ಮುಂದೆಯೇ ಅವರ ತೋಟಗಳೂ ಹೊಲಗಳೂ ಇವೆ. ಇದನ್ನು ನೋಡಿದರೆ ನನಗೆ ಮಲೆನಾಡಿನ ಹಳ್ಳಿಗಳ ನೆನಪು ಬರುತ್ತದೆ.

**ಶ್ರೀ. ರಾಬರ್ಟ್ ಬ್ರೌನ್** ಎಂಬುವರೊಬ್ಬರು ಅಲ್ಲಿಯ ರೈತರು. ಆತನ ಮಗ ನಮ್ಮ ಮನೆಯ ರೂಮೊಂದರಲ್ಲಿದ್ದ. ಆತನಿಗೆ ನನ್ನನ್ನು

ಒಂದು ಮೂರು ದಿನ ಅತಿಥಿಯನ್ನಾಗಿ ಮಾಡಿಕೊಳ್ಳಬೇಕೆಂದು ಆಸೆಯಾಯಿತು. ಆತ ಕರೆದಾಗ ನಾ ಒಲ್ಲೆ ಎನ್ನಲಾರದೆ ಹೋದೆ. ಇಬ್ಬರೂ ಮೇರ್ಕ ಸೇರಿದೆವು. ನಾವು ಬಂದ ಸುದ್ದಿ ಹೇಗೋ ತಿಳಿದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ನಾ ಅಲ್ಲಿಗೆ ಹೋದದ್ದು ಶನಿವಾರ. ಮರುದಿನ ಭಾನುವಾರದ ( ಪ್ರೀಚಿಂಗ್ ) ಉಪದೇಶ ನನ್ನದೇ ಆಗಬೇಕೆಂದು ಅಲ್ಲಿಯ ಜನರ ಪ್ರತಿನಿಧಿ ನನಗೆ ಹೇಳಿದರು. ಗಾಂಧೀಜಿಯ ಮೇಲೆ ಮಾತನಾಡಬೇಕೆಂದರು. ಸಂತೋಷದಿಂದ ಒಪ್ಪಿಗೆಯನ್ನಿತ್ತೆ. ಅವರೂ ಒಪ್ಪಿದರು.

ಮರುದಿನ ಚಳಿಗ್ಗೆ ಚರ್ಚ್ ಆವರಣವೆಲ್ಲಾ ಜನರಿಂದ ತುಂಬಿ ಹೋಗಿತ್ತು. ಅಲ್ಲಿಯ ಬಿಷಪ್ ತನ್ನ ಕಾರ್ಯಕ್ರಮ ಬಿಟ್ಟುಕೊಟ್ಟು ಭಾಷಣ ಮಾಡಲು ಹೇಳಿದ. ನನಗೆ ತಿಳಿದ ಮಟ್ಟಿಗೆ ಗಾಂಧೀಜಿಯ ತತ್ವಗಳನ್ನು ವಿವರಿಸಿ, ಕೊನೆಯಲ್ಲಿ ಏಸು ಕ್ರಿಸ್ತನಿಗೆ ಹೋಲಿಸಿದೆ. ನನ್ನ ಪಕ್ಕದಲ್ಲಿಯೇ ಕುಳಿತಿದ್ದ ಬಿಷಪ್ ಕೋಪಗೊಂಡು ‘ ಗಾಂಧೀಜಿಯನ್ನು ಏಸು ಕ್ರಿಸ್ತನಿಗೆ ಹೋಲಿಸಿದ್ದು ಸರಿಯಲ್ಲ ’ ಎಂದರು. ಕಾರಣ ಕೊಡುತ್ತಾ ಗಾಂಧೀಜಿ ಮನುಷ್ಯ ಮಾತ್ರದವರೆಂದೂ, ಏಸು ಕ್ರಿಸ್ತರು ದೇವರ ಅವತಾರವೆಂದೂ, ಮನುಷ್ಯರನ್ನು ದೇವರಿಗೆ ಹೋಲಿಸುವುದುಂಟೇ ಎಂದರು. ಮುಗುಳು ನಗೆ ನಕ್ಕು ಸಂಯಮದಿಂದ ಉತ್ತರ ಕೊಟ್ಟೆ. ನನಗೆ ಗಾಂಧೀಜಿ ದೇವರೋ, ಏಸು ಕ್ರಿಸ್ತರು ದೇವರೋ ತಿಳಿಯದು. ಕ್ರಿಸ್ತರ ಕೆಲವು ತತ್ವಗಳನ್ನು ಒಪ್ಪಿ ಗಾಂಧೀಜಿ ಅದರಂತೆ ನಡೆದಿದ್ದಾರೆ, ಸಾಧಿಸಿದ್ದಾರೆ. ಅದರಿಂದ ಗಾಂಧೀಜಿಯವರನ್ನು ಕ್ರಿಸ್ತರಿಗೆ ಹೋಲಿಸಿದ್ದರಲ್ಲಿ ತಪ್ಪೇನೂ ಇಲ್ಲ, ಎಂದೆ. ನೆರೆದಿದ್ದ ಜನಸಮೂಹ, “ ಹೋ ! ಅದು ನಿಜ ” ಎಂದಿತು, ಬಿಷಪ್ಪರು ಕೋಪಗೊಂಡು ಸಭೆಯಿಂದ ಹೊರಟುಹೋದರು. ನಾನು ಭಾಷಣವನ್ನು ಮುಂದುವರಿಸಿದೆ.

ಆಗ ನನ್ನ “ ಮಹಾತ್ಮಾ ಗಾಂಧಿ ಮತ್ತು ಭಾರತದ ಇತರ ಹುತಾತ್ಮರು ” ಎಂಬ ಇಂಗ್ಲೀಷ್ ಪುಸ್ತಕ ಪ್ರಕಟವಾಗಿತ್ತು. ೫೦ ಪ್ರತಿ

ಅಲ್ಲಿಗೆ ಒಯ್ದಿದ್ದೆ. ಬಿಷಪ್ಪರ ಕೋಪದ ಫಲವಾಗಿ ನನ್ನ ಪುಸ್ತಕಗಳೆಲ್ಲವೂ ಖರ್ಚಾದವು. ಇದೊಂದು ಅಪೂರ್ವವಾದ ಸಂಗತಿ ನಡೆಯಿತು. ಅಲ್ಲೂ ಗಾಂಧೀಜಿಯ ಪ್ರಭಾವ ಮೂರ್ತಿವೆತ್ತು ಬಂದಿರಬಹುದಲ್ಲವೇ ?

ನಾಳೆ ನಮಗೆ ಬಾಯಿಪರೀಕ್ಷೆ. ಅದರ ಛಳಿಯಂತೂ ಇಲ್ಲ. ಆದರೂ ಪರೀಕ್ಷೆತಾನೆ.

ಇತಿ ಹೀಗೆ,

ನಾ ಕೃಷ್ಣ.

—:o:—

## ಮೂವತ್ತಮೂರು

ಕೊಲಂಬಿಯಾ,

೨೭-೫-೪೮.

ಚಿ|| ಶಾರದಾ ಪ್ರಸಾದ್ :

ನಿನ್ನೆಯ ದಿನ ಸಂಜೆ ನಾಲ್ಕು ಘಂಟೆಗೆ ವಿಶ್ವವಿದ್ಯಾನಿಲಯದ ಎಂಟು ಮಂದಿ ಪ್ರೊಫೆಸರುಗಳು ನನ್ನ ವಿಚಾರಣೆ ನಡೆಯಿಸಿ ನಾನು ಪತ್ರಿಕೋದ್ಯಮದಲ್ಲಿ ಎಂ.ಎ., ಪರೀಕ್ಷೆಗೆ ಅರ್ಹ ಎಂದು ತೀರ್ಮಾನಿಸಿದುದರ ಫಲವಾಗಿ ಇಂದಿನಿಂದ ನಾನು ಅಮೇರಿಕಾ ವಿಶ್ವವಿದ್ಯಾನಿಲಯದ ಪದವೀಧರ.

ಜೂನ್ ನಾಲ್ಕನೆಯ ತಾರೀಖಿಗೆ ಪದವೀದಾನ ಮುಗಿಸಿಕೊಂಡು ನ್ಯೂಯಾರ್ಕಿಗೆ ಪ್ರಯಾಣ ಮಾಡುತ್ತೇನೆ. ಸಮತಾವಾದಿ ಪಕ್ಷದ ಮುಖಂಡರು **ಶ್ರೀ ನಾರ್ಮನ್ ಥಾಮಸರು** ಜೂನ್ ೧೮ ಕ್ಕೆ ಕಾಣಲು ಬರಿದಿದ್ದಾರೆ. ರಿಪಬ್ಲಿಕನ್ ರಾಷ್ಟ್ರಕೂಟಕ್ಕೆ ಪತ್ರಿಕಾ ಪ್ರತಿನಿಧಿಯ ಟಿಕೆಟ್ಟು ದೊರೆತಿರುವುದರಿಂದ **ಫಿಲಡೆಲ್ಫಿಯಾ** ನಗರಕ್ಕೆ ಒಂದುವಾರ ಹೋಗಸಲು. ಜುಲೈ ೩ಕ್ಕೆ ನ್ಯೂಯಾರ್ಕ್‌ನಿಂದ ಇಂಗ್ಲೆಂಡಿಗೆ ಪ್ರಯಾಣ ಬೆಳೆಸುತ್ತೇನೆ. ನಿನ್ನ ಕಾಗದ ಬಂದರೆ ನ್ಯೂಯಾರ್ಕ್‌ನ ವಿಳಾಸಕ್ಕೆ ಬರಲಿ.

ಇನ್ನೂ ಹೆಚ್ಚಿನ ವಿಶೇಷ ಮುಂದಿನ ಕಾಗದದಲ್ಲಿ.

ನಿನ್ನ ಹೀಗೆ,

ಕೃ,

—:o.—

## ಮೂವತ್ತನಾಲ್ಕು

ಬೊಂಬಾಯಿ,
೨೧-೫-೪೮

ಅಣ್ಣ ನಾಡಿಗ,

ತೇರ್ಗಡೆಯಾದದ್ದಕ್ಕೆ ಅಭಿನಂದನಗಳು, ಭಲೇ. ನಿನ್ನ ಪುಸ್ತಕ ಈಗತಾನೇ ಬಂತು. ಹತ್ತಾರು ಜನ ನೋಡಿ ನಲಿಯುತ್ತಿದ್ದೀವಿ. ಸಂಜೀವನೂ ಪಕ್ಕದಲ್ಲೇ ಇದ್ದಾನೆ.

ಪುಸ್ತಕ ಬಹಳ ಝೋಕಾಗಿ ತಳುಕಾಗಿ ಬಂದಿದೆ. ಮಿತಿಯಿಲ್ಲದ ಅಭಿನಂದನೆಗಳು. ವಿವರವಾಗಿ ಈಗಲೇ ಬರೆಯೋಣವೆಂದಿದ್ದೆ. ನಾಳೆ ದೊಡ್ಡದಾಗಿ ಬರೆಯುತ್ತೇನೆ.

ಇಂದು ಸಂಜೆ ನಿಮ್ಮ ಅಣ್ಣನವರನ್ನು ನೋಡುತ್ತೇನೆ. ಶ್ರೀ ಆರ್. ವಿ. ಮೂರ್ತಿಯವರು **U. N. Economic Commission for Asia and the Far East** ನ ಸಮ್ಮೇಳನ ಸಂದರ್ಭದಲ್ಲಿ **ಉದಕ ಮಂಡಲಕ್ಕೆ** ಹೋಗಿದ್ದಾರೆ. ಸಂಜೀವ ಅವರಿಗೆ ಬರೆಯುತ್ತಾನೆ.

ಸಿಗಿ, ಸಿಗಿ, ಸಲಗವು ಕಬ್ಬಿನ ಜಲ್ಲೆಗಳನ್ನು ಸಿಗಿಯುವಂತೆ ಖ್ಯಾತಿಯನ್ನು ಸಿಗಿ.

ನಮ್ಮ ಪತ್ರಿಕೆಗೀಗ ಕನ್ನಡಿಗರೊಬ್ಬರು ಸಂಪಾದಕರು. ಶ್ರೀ ವಿ. ಬಿ. ಕುಲಕರ್ಣಿಯೆಂದು. ಶ್ರೀ ದಿವಾಕರರ ಶಿಷ್ಯವೃಂದದವರು.

ನಮ್ಮ ತಂದೆ ತಾಯಿಯವರಿಗೆ ನಿನ್ನ ಪುಸ್ತಕ ಕಂಡರೆ ನಿಮ್ಮ ಮನೆಯ ಹಿರಿಯರಿಗೆ ಆದಷ್ಟೇ ಸಂತೋಷವಾಗುತ್ತದೆ – ನೀನು ನನ್ನ ಅಣ್ಣನಲ್ಲವೇ?

ಶೌರಿ.

—:o:—

## ಮೂವತ್ತೈದು

ಬೊಂಬಾಯಿ,
೩೧—೫—೪೮.

ಕೃಷ್ಣ :

ನಿನ್ನೆಯ ದಿನ ಸಾಯಂಕಾಲ ನಿಮ್ಮ ಅಣ್ಣನವರಿಂದ ಒಂದು ಕಾರ್ಡು ಬಂದಿತು. ಅದರಲ್ಲಿ ನೀನು ನಿನ್ನ ಎಂ.ಎ., ಪರೀಕ್ಷೆಯಲ್ಲಿ ಜಯಶಾಲಿಯಾದ ಸಂತೋಷದ ಸಮಾಚಾರವನ್ನು ತಿಳಿಸಿದ್ದರು. ಆಗ ನನಗೆ ಅದೆಷ್ಟು ಸಂತೋಷವಾಯಿತೋ! ನಾನೇ ಪರೀಕ್ಷೆಯಲ್ಲಿ ಉತ್ತೀರ್ಣನಾದವನಂತೆ ಉನ್ಮತ್ತನಾಗಿ ಬಿಟ್ಟೆ. ಶೌರಿಯು ಕೂಡ ನಿನ್ನೆ ಬಂದಿದ್ದ. ನಿನ್ನ ಸಂತೋಷದ ಸುದ್ದಿಯನ್ನು ತಿಳಿದು ಇಬ್ಬರೂ ಆನಂದ ಪಟ್ಟೆವು. ಈ ದಿನ ಪುನಃ ಶೌರಿಯ ಕೊಟಡಿಗೆ ಹೋಗಿದ್ದೆ. ಅಲ್ಲಿ ನಿನ್ನ ಪುಸ್ತಕವನ್ನು ನೋಡಿದೆ. ತುಂಬಾ ಚೆನ್ನಾಗಿ ಬಂದಿದೆ. ನನ್ನ ಎರಡೂ ಷರತ್ತುಗಳನ್ನು ನೀನು ಪೂರ್ಣಗೊಳಿಸಿದ್ದೀಯೆ. ನೀನಿನ್ನು ಭಾರತಕ್ಕೆ ಮರಳಬಹುದು. ನಿನಗಾವ ಭಾಗ್ಯಲಕ್ಷ್ಮಿ ಹಾರ ಹಿಡಿದುಕೊಂಡು ಕಾದಿರುವಳೋ!

ಪ್ರೀತಿಯೊಡನೆ

ನಿನ್ನ,
ಸಂಜೀವ.

—:o:—

## ಮೂವತ್ತಾರು

ಸೆಂಟ್ ಲೂಯಿಸ್,
೧—೬—೪೮.

ಶೌರಿ :

ನನ್ನ ಅಮೇರಿಕದ ಗೆಳೆಯ ಶ್ರೀ. **ರಿಚರ್ಡ್ ಸ್ಮಿತ್** ಇದಾನಲ್ಲ, ಅವನ ಊರು ಇದು. ಅವನ ಆಹ್ವಾನದ ಮೇಲೆಯೇ ಇಲ್ಲಿಗೆ ಬಂದಿ

ದ್ದೇನೆ. ಆತನೂ ಹೊರಡುವುದು ನಿಶ್ಚಯವಾಗಿದೆ. ಜುಲೈನಲ್ಲಿ ಆತ ಹೊರಡುತ್ತಾನೆ.

ಸೆಂಟ್ ಲೂಯಿಸ್ ವಿಶ್ವವಿದ್ಯಾನಿಲಯದಲ್ಲಿ ಪೂನಾದ ಶ್ರೀ ವಾಘ್ ಎಂಬುವರಿದ್ದಾರೆ. ಅವರ ಎಂ.ಎಸ್., ಪರೀಕ್ಷೆ ಸೆಪ್ಟಂಬರಿಗೆ ಮುಗಿಯುವುದು. ಇನ್ನೊಬ್ಬರು ಶ್ರೀ ಮುಂಡ್ಕೂರರೆಂದು. ಇವರು ಮಂಗಳೂರಿನ ಕನ್ನಡಿಗರು. ತುಂಬಾ ಬುದ್ಧಿವಂತರು. ನಾವೆಲ್ಲ ಸೇರಿ ನಮ್ಮ ಅಡಿಗೆ ಮಾಡಿದ್ದೆವು. ಪರದೇಶದಲ್ಲಿ ಇದೇ ಒಂದು ಜೋಕು ನಮಗೆ.

ಅಮೇರಿಕೆಗೆ ಬಂದ ಕೆಲಸವನ್ನಂತೂ ಮುಗಿಸಿದೆನಪ್ಪ. ಡಿಗ್ರಿಯ ಮೋಹವೂ ಆಯಿತು. ಮುಂದಿನದೇ ಜವಾಬ್ದಾರಿಯುತವಾದ ಭಾರ.

ಕರ್ನಾಟಕದ ಏಕೀಕರಣದ ಬಗ್ಗೆ ನೀನು ಬರೆದ ಮಾತುಗಳನ್ನು ಓದಿ ವ್ಯಸನವಾಯಿತು. ಮೈಸೂರಿನ ನಮ್ಮ ಜನ ಏಕೀಕರಣದ ಬಗ್ಗೆ ವಿಶಾಲವಾದ ಮನೋಭಾವನೆಯನ್ನು ಎಂದು ತಾಳಿಯಾರೋ ? ಕನ್ನಡ ನಾಡಿನ ಭವಿತವ್ಯವನ್ನೇ ಮಾರ್ಪಾಡು ಮಾಡುವ ಸುಯೋಗ ಮೈಸೂರಿನವರಿಗಿತ್ತು. ಇಂತಹ ಸುಸಂಧಿಯನ್ನು ಕಳೆದುಕೊಂಡರಲ್ಲಾ ಎಂದು ನನಗೆ ಅತೀವ ಖೇದವಾಗುತ್ತಿದೆ. ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ಮುಂದಾಳುತನವನ್ನು ವಹಿಸಿದ ನಮ್ಮ ನಾಯಕರುಗಳು ಕನ್ನಡ ನಾಡಿನ ಏಕೀಕರಣದ ಬಗ್ಗೆಯೂ ಒಂದೇರೀತಿಯಲ್ಲಿ ಹೋರಾಡುತ್ತಿದ್ದರಲ್ಲಾ ! ಆ ಕಾವು, ಆ ದೇಶ ಪ್ರೇಮ, ಆ ರಾಜಕಾರಣ ಪಟುತ್ವ, ಈಗ ಆರಿ ಹೋಯಿತೇ ? ಅಳಿಸಿ ಹೋಯಿತೇ ?

ನಮ್ಮಣ್ಣಂದಿರು ಬೊಂಬಾಯಿಗೆ ಬಂದಿದ್ದಾರಂತೆ. ಅವರನ್ನು ನೋಡಿದ್ದಿಯೇನು ? ನೀನು "ಸೋಮಾರಿ ಆಗಿದ್ದೇನೆ" ಎಂದು ಬರೆದಿದ್ದೀಯಲ್ಲ ಇದರ ಅರ್ಥವೇ ನನಗಾಗಲಿಲ್ಲ. ಕೂಡದು ಕಣಪ್ಪಾ, ನನಗಾಗಿಯಾದರೂ ಸೋಮಾರಿಯಾಗಿರಬಾರದು.

ಹೂಂ! ಇನ್ನು ಪ್ರಾರಂಭ, ನನ್ನ ತಿರುಗಾಟ, ಚಕ್ರಪಾದ ಮೂರ್ತಿಯಾಗಿ.

ಇತಿ ಹೀಗೆ,
ಕೃಷ್ಣ.

—:o:—

## ಮೂವತ್ತೇಳು

ಬೊಂಬಾಯಿ,
೯—೬—೪೮.

ಅಣ್ಣ ನಾಡಿಗ :

ನೀನು ಕಳೆದ ತಿಂಗಳು ೨೨ ನೇ ತಾರೀಖು ಕಳುಹಿಸಿದ ಪುಸ್ತಕ ತಲಪಿದ್ದಕ್ಕೆ ನಾನೂ ಸಂಜೀವನೂ ಒಂದು ಪತ್ರದಲ್ಲಿ ಅರ್ಧ ಅರ್ಧ ಬರೆದು ತುಂಬಿದ್ದೆವು. ಅದು ನಿನಗೆ ತಲಪಿರಬೇಕು. ಪುಸ್ತಕವನ್ನು ನಮ್ಮ ಗೆಳೆಯರೆಲ್ಲರೂ ಕೊಂಡಾಡುತ್ತಿದ್ದಾರೆ.

ಪುಸ್ತಕದ ಬಗ್ಗೆ ನನ್ನ ಅಭಿಪ್ರಾಯಗಳೇನೆಂದು ಕೇಳುತ್ತೀಯೇನೋ ?

ಗಾಂಧೀಜಿಯ ಮೇಲೆ ನೀನು ಬರೆದಿರುವುದು ಚೆನ್ನಾಗಿದೆ. ಅಲ್ಲದೆ ನೆಹ್ರೂವಿಂದ, ಐರ್‌ಸ್ಟೈನರಿಂದ, ಪ್ಯಾರೇಲಾಲರಿಂದ ಅನೇಕ ವಾಕ್ಯಗಳನ್ನುಪಯೋಗಿಸಿಕೊಂಡಿರುವುದರಿಂದ ನಿನಗೆ ಶ್ರಮವೂ ಉಳಿದಿದೆ, ಲೇಖನದ ರಮ್ಯತೆಯೂ, ಸತ್ಯವೂ ಹೆಚ್ಚಿವೆ. ಬಹಳ ಚೂಟಿಯಾದ ವಿಧಾನ. ಕೆಲವು ಟೀಕೆಗಳೂ ಇವೆ. ಅವನ್ನು ಈಗ ಬರೆಯುವುದಿಲ್ಲ. ನೀ ಇಲ್ಲಿಗೆ ಬರುತ್ತೀಯಲ್ಲ, ಆಗ ಹೇಳುತ್ತೇನೆ. ಒಟ್ಟಿನಲ್ಲಿ 'ಭಲೆ' ಎಂದಿಷ್ಟೇ ಹೇಳುತ್ತೇನೆ.

ಕಳೆದ ವಾರ ನಿಮ್ಮಣ್ಣನವರನ್ನು ಕಂಡಿದ್ದೆ. ಮೊದಲ ದಿನ ಡಾ|| ಎಲ್. ಕೆ. ರಾವ್‌ರವರ ಮನೆಗೆ ಹೋದಾಗ ನಿಮ್ಮಣ್ಣ ಬೇರೆ ಯಾರ

ಮನೆಗೋ ಹೋಗಿದ್ದರು. ಮಾರನೆಯ ದಿನ ಮಧ್ಯಾನ್ಹ ಹೋಗಿದ್ವಿ. ಒಂದು ಒಂದೂವರೆ ಘಂಟೆಗಳ ಕಾಲ ಆರಾಮವಾಗಿ ಮಾತಾಡುತ್ತಿದ್ದೆವು. ನಿಮ್ಮಣ್ಣನವರಿಗಿಂತ ಅವರ ಮಗಳು ಸುಧಾ ಕೈಯಲ್ಲಿ ಹೆಚ್ಚು ಹರಟೆ ಹೊಡೆದೆ. ಹುಡುಗಿ ಅದೆಷ್ಟು ಚಟುವಟಿಕೆಯಿಂದಿದ್ದಾಳೆ. ಕೈಲಾಸಂ ಮಾತಲ್ಲಿ '**ಅವಳ್ಟೆಂಗಿಗ್ಬ್ರೇಕೇ**' ಇಲ್ಲ. ಅವಳಿಗೆ ಹರಟೆಮಲ್ಲಿ, ಅಥವಾ ಹೆಚ್. ಮಲ್ಲಿ ಎಂದು ನಾಮಧೇಯವನ್ನು ಇಟ್ಟೆ. ಅದೇ ಆ ಹುಡುಗಿ ಯ ಅಣ್ಣ ನಾಗರಾಜ ಬಹಳ ಗಂಭೀರಸ್ಥನಾಗಿ ಮಾತಾಡದೆ ಕುಳಿತಿದ್ದ. ಅವನನ್ನು ನಾನೇ ನಾನಾಗಿ ಮಾತಾಡಿಸದಿದ್ದುದು ನನ್ನದೇ ತಪ್ಪು. ಎಲ್. ಕೆ. ರಾವ್ ರು ಆಂಬೋಡೆ, ಬಿಸಿಬೇಳೆ ಹುಳಿಯನ್ನ, ಇತ್ಯಾದಿ ಯನ್ನೆಲ್ಲ ಕೊಟ್ಟರು. ಅಷ್ಟರ ಜತೆಗೆ ಕಾಫಿಯನ್ನು ಸಹ ಮುಕ್ತಾಯ ಮಾಡಿದೆ. ಆಗಸ್ಟ್‌ನಲ್ಲಿ ನೀನು ಬರುವಾಗ ಈ ದೃಶ್ಯವನ್ನು ಮತ್ತೆ ಆಡಿ ತೋರಿಸಬಹುದಲ್ಲ.

ನಿಮ್ಮ ದೇಶದಲ್ಲಿ ಬೇಸಗೆಯಲ್ಲ ಮುಗಿಯಿತೇ ? ಅಲ್ಲಿನ ಬೇಸಗೆ ನಮ್ಮ ಬೆಂಗಳೂರಿನ ಬೇಸಗೆಯಂತೆಯೇ ಇರುತ್ತದೇನು ? ನಾನು ನಿನಗೆ ಅಮೇರಿಕಾಗೆ ಬರೆಯುವದಿದೇ ಕಡೆಯ ಕಾಗದವೋ ?

ಹೆಚ್ಚಿಗೆ ಏನು ವಿಶೇಷ ?

ಶೌರಿ.

—:o.—

## ಮೂವತ್ತೆಂಟು

ನ್ಯೂಯಾರ್ಕ್,
೧೭–೬–೪೮.

ಅಯ್ಯಾ ಶೌರಿ :

ಜೂನ್ ಎಂಟನೆಯ ತಾರೀಖು ಕೊಲಂಬಿಯಾನಗರವನ್ನು ಬಿಟ್ಟೆ. ಮನಸ್ಸು ಭಾರವಾಗಿತ್ತು. ಆತ್ಮೀಯರಾಗಿ ಹೊಂದಿಕೊಂಡಿದ್ದ ಕೊಲಂಬಿ ಯಾದ ಜನರು ನನ್ನನ್ನು ಬೀಳ್ಕೊಡಲು ರೈಲ್ವೆ ನಿಲ್ದಾಣಕ್ಕೆ ಬಂದಿದ್ದರು.

ಆಪ್ತ ಗೆಳೆಯರಾದ ಶ್ರೀ ಮತ್ತು ಶ್ರೀಮತಿ ಮೆಲ್ವಿನ್‌ಸ್ಟ್ರಾಡ್‌ರವರು ಗದ್ಗದ ಕಂಠದಿಂದ ನನಗೆ ಸುಖಪ್ರಯಾಣವನ್ನು ಕೋರಿ ಪುನಃ ಕೊಲಂಬಿಯಾಕ್ಕೆ ಬರಬೇಕೆಂದು ಆಹ್ವಾನವಿತ್ತರು. ಆ ದಿನವೆಲ್ಲಾ ನನ್ನ ಪ್ರೊಫೆಸರುಗಳು, ಬಳಕೆಯಾಗಿದ್ದ ಊರಿನಜನರೂ ಮತ್ತು ಸ್ನೇಹಿತರುಗಳನ್ನು ನೋಡುವುದರಲ್ಲಿಯೇ ಕಾಲ ಕಳೆದೆ. ಒಂದು ವರ್ಷ ಈ ನಗರದಲ್ಲಿದ್ದು ಇಲ್ಲಿಯ ನಾನಾ ಚಟುವಟಿಕೆಗಳಲ್ಲಿ ಭಾಗ ತೆಗೆದುಕೊಂಡು ನನ್ನ ಜೀವನದಲ್ಲಿಯೇ ಚಿರಸ್ಥಾಯಿಯಾಗಿ ನಿಲ್ಲತಕ್ಕ ಈ ಊರಿನಲ್ಲಿ ಕಳೆದ ದಿನಗಳಿಗಾಗಿ ನೆನಪು ಬಿಚ್ಚಿಬಿಚ್ಚಿ ಬಂದಾಗ ಮನಸ್ಸಿನ ಭಾರ ತುಂಬಾ ಜಾಸ್ತಿಯಾಯಿತು, ಗೆಳೆಯ.

ಕವಿ ರವೀಂದ್ರರು ಹೇಳಿದ ಮಾತು " **Parting is always sad,** " ಆಗ ಚೆನ್ನಾಗಿ ಜ್ಞಾಪಕಕ್ಕೆ ಬಂತು. ಆದರೆ ಎಲ್ಲಕ್ಕಿಂತ ಹಿರಿದಾದ ಸಂತೋಷ ನನ್ನ ಅಗಲಿಕೆಯ ಭಾರವನ್ನು ಕಡಿಮೆಮಾಡಿಸಿತು. ಹೋ! ಒಂದು ವರ್ಷದ ಹಿಂದೆ! ನೆನಪು ಮಾಡಿಕೊಳ್ಳಲು ಸಹ ಹೆದರಿಕೆಯಾಗುತ್ತದೆ. ಭಾರತದ ನನ್ನ ಜನ ನನ್ನ ವಿಷಯದಲ್ಲಿಟ್ಟಿದ್ದ ನಂಬಿಕೆಗೆ ಅಪಾತ್ರನಾಗುವಷ್ಟು ಕಳಂಕತರುವಂತಹ, ಅಮೇರಿಕೆಗೆ ನಾನು ಬಂದ ಗುರಿಯನ್ನು ಸಾಧಿಸದೆ, ಹಿಂತಿರುಗಿ ಬಿಡುತ್ತಿದ್ದೆನಲ್ಲಾ! ಆ ಚಿತ್ರ ನನಗಿನ್ನೂ ಕಣ್ಣಿಗೆ ಕಟ್ಟಿದಂತಿದೆ. ಒಂದು ವರ್ಷದ ನಂತರ! ಪತ್ರಿಕೋದ್ಯಮದಲ್ಲಿ ಯಶಸ್ವಿಯಾಗಿ ಎಂ.ಎ., ಡಿಗ್ರಿಯನ್ನು ಪಡೆದು, ನನಗೆ ಸಿಕ್ಕ ವೇಳೆಯಲ್ಲಿ ಭಾರತದ ಬಗ್ಗೆ ಸಾಕಷ್ಟು ಸೇವೆಮಾಡುವ ಅವಕಾಶ ಲಭಿಸಿ, ಯಾವ ನನ್ನ ಜನ ನನ್ನನ್ನು ಇಲ್ಲಿಗೆ ಹರಸಿ ಕಳುಹಿಸಿದರೋ, ಆ ಜನರ ಆಸೆಯನ್ನು ಸಂಪೂರ್ಣಗೊಳಿಸಿದ ಮನಃ ತೃಪ್ತಿ ನನಗಾಯಿತಲ್ಲಾ, ಅದೇ ನನ್ನ ಪುಣ್ಯ. ಕಳೆದ ವರ್ಷದ ಚಿತ್ರ, ಈ ಚಿತ್ರದ ಎದುರು ಮಾಸಿಹೋಗಿ ನನ್ನ ಮುಂದಿನ ಕೆಲಸಕ್ಕೆ ಪುನಃ ಸ್ಫೂರ್ತಿಯನ್ನು ತಂದೊಡ್ಡುತ್ತಿದೆ.

ಬಸ್ಸಿನ ನಿಲ್ದಾಣದಲ್ಲಿ ನೂರಾರು ಜನ ಕೊಲಂಬಿಯನ್ನರು, " **Cheer you, Mr : Murthy, Good luck, Wish you the**

**best of life ; Wish you a happy journey Mr : Murthy, So long"** ಎಂದು ಹೇಳಿದ ಒಂದೊಂದು ಮಾತೂ ಈಗಲೂ ಕೇಳಿಸು ತ್ತಿದೆ. ಆ ದೃಶ್ಯ ನಾ ಎಂದೂ ಮರೆಯುವಂತಿಲ್ಲ. ಬಸ್ಸು ಹೊರಡುವ ಸಮಯ ಬಂದೇಬಿಟ್ಟಿತು. ಎಂಟು ಘಂಟೆ ಥಣ್ ಎಂದು ಹೊಡೆಯು ತ್ತಲೇ ಬಸ್ಸಿನ ಸಾರಥಿ ಆ ಜನರ ಹರ್ಷೋದ್ಗಾರಗಳ ಮಧ್ಯೆ ಚಿಕಾಗೋ ಮಾರ್ಗವಾಗಿ ನಡೆಸಿಬಿಟ್ಟನು. ಅಂದಿಗೆ ನನ್ನ ಒಂದು ವರ್ಷದ ರಸವ ತ್ತಾದ ಜೀವನ ಕೊನೆಗೊಂಡಿತು. ಅದರೊಂದಿಗೆ ನನ್ನ ಜೀವನದ ಒಂದು ಅಧ್ಯಾಯವೂ ಮುಗಿಯಿತಂದರೆ ತಪ್ಪೇನಯ್ಯಾ, ಶೌರಿ.

ಬಸ್ಸಿನಲ್ಲಿ ಹಾಗೆಯೇ ಮಲಗಿಬಿಟ್ಟೆ. ಈ ದೇಶದ ಬಸ್ಸಿನ ಪ್ರಯಾಣ ತುಂಬಾ ಸುಖಕರ. ರಾತ್ರಿಯಹೊತ್ತು ಮಲಗಿಕೊಳ್ಳಲು ಅನುಕೂಲವಾಗುವಂತೆ ಆರಾಮವಾಗಿ ಬಸ್ಸಿನಲ್ಲಿ ಇಳಿಜಾರಾದ ಸೀಟು ಗಳನ್ನು ಹಾಕಿರುತ್ತಾರೆ. ಬಸ್ಸಿನ ಪ್ರಯಾಣದಖರ್ಚು ರೈಲ್ವೆ ಪ್ರಯಾಣ ಕ್ಕಿಂತ ಕಡಿಮೆ. ಬೆಳಿಗ್ಗೆ ನಾನು ಕಣ್ಣುಬಿಟ್ಟಾಗ ಚಿಕಾಗೋನಗರ ಬಂದುಬಿಟ್ಟಿತ್ತು. ಈ ನಗರದ ವಿಷಯದಲ್ಲಿ ಸ್ವಲ್ಪ ತಿಳಿಸಿದ್ದೇನಲ್ಲವೆ ?

ಈ ದೇಶದಲ್ಲೆಲ್ಲಾ ಪರದೇಶದವರಿಗೆ ಮತ್ತು ವಿದ್ಯಾರ್ಥಿಗಳಿಗೆ ಪರಸ್ಥಳದಲ್ಲಿ ಇಳಿದುಕೊಳ್ಳಲು ಗಂಡಸರಿಗೆ ವೈ. ಎಂ. ಸಿ. ಎ. ಹೆಂಗಸ ರಿಗೆ ವೈ. ಡಬ್ಲ್ಯು. ಸಿ. ಎ. ಹೆಚ್ಚು ಅನುಕೂಲವಾಗಿರುತ್ತವೆ. ನಾನು ವೈ. ಎಂ. ಸಿ. ಎ. ಯಲ್ಲಿಯೇ ಉಳಿದೆನೆಂದು ಬೇರೆ ಹೇಳಬೇಕಾಗಿಲ್ಲವಲ್ಲ. ಚಿಕಾಗೋವಿನಲ್ಲಿ ನಾಲ್ಕುದಿನ ಮಾತ್ರ ನಾ ಇದ್ದೆ. ಹೆಚ್ಚುದಿನ ಇರಲು ಹಣವಿರಲಿಲ್ಲ. ಮೈಸೂರಿನ ಗೆಳೆಯರಾದ ಶ್ರೀ ನಾಗರಾಜರಾಯರನ್ನು ಪುನಃ ನೋಡಿದೆ. ಅವರು ಅಂತರರಾಷ್ಟ್ರೀಯ ವಿದ್ಯಾರ್ಥಿಗಳಿಗೆ ಭಾರ ತೀಯ ಊಟವೊಂದನ್ನು ಕೊಡಲು ಸ್ನೇಹಸಮ್ಮೇಳನ ಕಲೆಸಿದ್ದರು. ಅಂದು ನಾನೂ ಅವರೂ ಸೇರಿ ಸುಮಾರು ೧೨೫ ಜನರಿಗೆ ಅಡಿಗೆ ಮಾಡಿ ದ್ದೆವು. ನೀರುಳ್ಳಿ, ಆಲೂಗೆಡ್ಡೆ ಹುಳಿ, ಪೂರಿ, ಆಲೂಗೆಡ್ಡೆ ಪಲ್ಯ, ಅನ್ನ,

ಬದನೇಕಾಯಿ ಭಜ್ಜಿ ಇಷ್ಟನ್ನೂ ತಯಾರುಮಾಡಿದ್ದೆವು. ಹುಳಿಗೆ ಮಸಾಲೆ ಪುಡಿಯನ್ನು ಹಾಕುವುದರ ಬದಲು ಖಾರದಪುಡಿಯನ್ನು ಹಾಕಿ ಮದರಾಸಿನ "ಸಾಂಬಾರ್" ಮಾಡಿಬಿಟ್ಟಿದ್ದೆವು. ಭಾರತೀಯರಲ್ಲದ ಅತಿಥಿಗಳು ಅನ್ನದಮೇಲೆ ಹುಳಿಯನ್ನು ಹಾಕಿಸಿಕೊಂಡು ಊಟಮಾಡು ತ್ತಿರುವಾಗ, "ಹುಳಿ ಹೇಗಿದೆ?" ಎಂದು ನಾವು ಕೇಳಿದೆವು. ಖಾರ ವನ್ನೇ ತಿಂದರಿಯದ ಆ ಜನ ಒಂದು ತುತ್ತು ಹುಳಿಯನ್ನವನ್ನು ಉಂಡ ಕೂಡಲೇ ಅನೇಕಸಲ ನೀರಿನ ಆಶ್ರಯವನ್ನು ಪಡೆದರೂ, ಖಾರದ ಪರಿ ಣಾಮದಿಂದ ಉಂಟಾದ ವೇದನೆಯನ್ನು ಬಲವಂತವಾಗಿ ಸಹಿಸಿ "ಹುಳಿ ತುಂಬಾ ಚೆನ್ನಾಗಿದೆ" ಅಂದಾಗ ನಮ್ಮ ನಗು ಹೇಳತೀರದಾ ಗಿತ್ತು. ಆದರೆ ಬದನೆಕಾಯಿಭಜ್ಜಿ ಮತ್ತು ಪೂರಿಪಲ್ಯವನ್ನು ಚೆನ್ನಾಗಿ ಮೆದ್ದರು. ಆ ಊಟ ಬಲು ಚೆನ್ನಾಗಿತ್ತು.

ಚಿಕಾಗೋವಿನಿಂದ **ಡೆಟ್ರಾಯಿಟ್** ನಗರಕ್ಕೆ ಪ್ರಯಾಣ ಮಾಡಿದೆ. ಡೆಟ್ರಾಯಿಟ್ "**ಫೋರ್ಡ್**" ಕಾರುಗಳ ನಗರ. ಬೆಳಗ್ಗೆಯಲ್ಲಾ ಫೋರ್ಡ್ ಕಾರ್ಖಾನೆಯನ್ನು ನೋಡಿದೆ. ಸಂಜೆ ಪ್ರಪಂಚದಲ್ಲೆಲ್ಲಾ ಸುಪ್ರಸಿದ್ಧವಾದ ಎಡಿಸನ್ ಸಂಸ್ಥೆ **(Edison Institute)** ಗೆ ಭೇಟಿ ಯಿತ್ತೆ. ಪ್ರಪಂಚದಲ್ಲಿ ವೈಜ್ಞಾನಿಕ ಬೆಳವಣಿಗೆ ಪ್ರಾರಂಭವಾದಾಗಿನಿಂದ ನಿನ್ನೆಯ ವರೆಗಿನ ಎಲ್ಲ ಯಂತ್ರ ಸಾಮುಗ್ರಿಗಳನ್ನೂ ಈ ಪ್ರದರ್ಶನಾಲ ಯದಲ್ಲಿ ಇಟ್ಟಿದ್ದಾರೆ. **ಎಡಿಸನ್ನನ** ಕೈ ಬರಹದ ಕಾಗದಗಳನ್ನು ಜೋ ಪಾನವಾಗಿ ಇಟ್ಟಿದ್ದಾರೆ. ಈ ಪ್ರದರ್ಶನಾಲಯದ ಪಕ್ಕದಲ್ಲಿಯೇ ಎಡಿ ಸನ್ ಮಂದಿರ **(Edison Cottage)** ಎಂಬ ಮಾದರಿಯ ಹಳ್ಳಿಯೊಂದಿದೆ. ಇದು ಎಡಿಸನ್ನನು ತಯಾರಿಸಿದ ಮಾದರಿ ಹಳ್ಳಿ. ಅಮೇರಿಕೆಗೆ ಬಂದವ ರೆಲ್ಲಾ ಈ ಸಂಸ್ಥೆಯನ್ನು ನೋಡದೆ ಹೋಗಬಾರದೆಂದು ನನ್ನ ಅಭಿ ಪ್ರಾಯ.

**ಡೆಟ್ರಾಯಿಟ್** ನಗರದ ಮಧ್ಯಭಾಗದಲ್ಲಿ ಡೆಟ್ರಾಯಿಟ್ ನದಿ ಹರಿಯುತ್ತದೆ. ಈಚೆ ದಡ ಅಮೇರಿಕಾಕ್ಕೆ ಸೇರಿದ್ದು. ಆಚೆ ದಡ

ಕೆನಡಾಕ್ಕೆ ಸೇರಿದ್ದು. ಡೆಟ್ರಾಯಿಟ್‌ನಿಂದ ನೇರವಾಗಿ ಟೋರಾಂಟೋವಿಗೆ ಬಸ್ಸಿದೆ. ನಾನು ಮರುದಿನ ಟೋರಾಂಟೋವಿಗೆ ಟಿಕೆಟ್ಟನ್ನು ತೆಗೆದುಕೊಂಡು ಬಸ್ಸಿನಲ್ಲಿ ಕುಳಿತೆ. ಬಸ್ಸು ನದಿಯನ್ನು ದಾಟಿದ ಕೂಡಲೇ ಕೆನಡಾದ ಗಡಿಯಲ್ಲಿ ನಿಲ್ಲುತ್ತದೆ. ಅಲ್ಲಿ ಕೆನಡಾ ಸರ್ಕಾರದವರು ಎಲ್ಲರನ್ನೂ ಶೋಧಿಸುತ್ತಾರೆ. ನನ್ನ ರಹದಾರಿಯು ಚೀಟಿ ಬ್ರಿಟಿಷ್ ಸರ್ಕಾರದವರಿಂದಲೇ ಕೊಡಲ್ಪಟ್ಟಿದ್ದುದರಿಂದಲೂ ಕೆನಡ ಸರ್ಕಾರವು ಬ್ರಿಟಿಷರಿಗೆ ಅಧೀನದಲ್ಲಿದ್ದುದರಿಂದಲೂ ಈ ರಹದಾರಿಯೇ ಸಾಕೆಂದು ನನ್ನ ಅಭಿಪ್ರಾಯವಾಗಿತ್ತು. ಪೋಲೀಸರು ನನ್ನೆಡೆಗೆ ಬಂದು ರಹದಾರಿಯನ್ನು ಶೋಧಿಸಿದಾಗ ರಹದಾರಿ ಸರಿಯಾಗಿಲ್ಲವೆಂದು ನಾನು ಅಕ್ರಮವಾಗಿ ಕೆನಡಾದೇಶಕ್ಕೆ -ಕಾಲಿಟ್ಟಿರುವೆನೆಂದೂ ಹೇಳಿ ನನ್ನನ್ನು ಅಲ್ಲಿಯೇ ದಸ್ತಗಿರಿಮಾಡಿದರು. ನಾನು ನಿರುಪಾಯನಾಗಿ ಬಸ್ಸಿನಿಂದ ಮಧ್ಯ ರಾತ್ರಿಯಲ್ಲಿ ಇಳಿಯಬೇಕಾಯಿತು. ನನ್ನನ್ನು ಪೋಲೀಸ್ ಸ್ಟೇಷನ್ನಿಗೆ ಕರೆದೊಯ್ದರು. ರಾತ್ರಿ ಮೂರುಘಂಟೆಯ ವರೆಗೆ ನನ್ನನ್ನು ಅಲ್ಲಿಟ್ಟಿದ್ದು ನನ್ನ ಬಗ್ಗೆ ವಿವರಣೆಗಳನ್ನೆಲ್ಲಾ ತಿಳಿದುಕೊಂಡಮೇಲೆ ನನ್ನನ್ನು ಕೆನಡಾ ಸಂಸ್ಥಾನದಿಂದ ಗಡೀಪಾರುಮಾಡಿ ಪುನಃ ಡೆಟ್ರಾಯಿಟ್‌ಗೆ ಕರೆದುಕೊಂಡು ಬಂದು ಬಿಡುಗಡೆ ಮಾಡಿದರು. ನನ್ನ ಜೊತೆಗೆ ಒಬ್ಬ ಪೋಲೀಸ್ ಅಧಿಕಾರಿಯೂ ಬಂದಿದ್ದರು. ನಾನು ಕೆನಡಾಕ್ಕೆ ಪ್ರವೇಶ ಮಾಡಿದಂದಿನಿಂದ ಬಿಡುಗಡೆಯಾಗುವವರೆಗಿನಷ್ಟು ಕಾಲದಲ್ಲಿಯೂ ಪೋಲೀಸರು ತುಂಬಾ ಚೆನ್ನಾಗಿ ನನ್ನನ್ನು ನೋಡಿಕೊಂಡರು.

**ಡೆಟ್ರಾಯಿಟ್‌ನಿಂದ ಕ್ಲೀವ್‌ಲೆಂಡ್‌ಗೆ** ಬಂದೆ. ಅಲ್ಲಿ ಬೆಳಿಗ್ಗೆ ಬಸ್‌ಸ್ಟ್ಯಾಂಡಿನ ಸ್ನಾನಗೃಹದಲ್ಲಿ ಸ್ನಾನಮಾಡಿಕೊಂಡು ನೇರವಾಗಿ **ಬಫೆಲೋ** ನಗರಕ್ಕೆ ಬಂದೆ.

ಸಾಗರದಿಂದ ಜೋಗದ ಜಲಪಾತಕ್ಕೆ ಹದಿನೆಂಟು ಮೈಲಿ ದೂರವಿರುವಂತೆ ಬಫೆಲೋವಿನಿಂದ **ನಯಾಗರ** ಜಲಪಾತಕ್ಕೆ ಅಷ್ಟೇ ದೂರವಿದೆ. ನಯಾಗರ ಅಮೇರಿಕೆಯ ಸೌಂದರ್ಯದ ಖಣಿ. ಮನುಷ್ಯ

ಮಾತ್ರದವರು ಚಿತ್ರಿಸಿದ ಅದ್ಭುತದ ಒಂದು ಪ್ರತೀಕ. ವೈಜ್ಞಾನಿಕ ಬೆಳವಣಿಗೆಯ ಒಂದು ಮಹಾ ಪ್ರಯೋಗ. ಇದನ್ನು ಜೋಗದ ಜಲ ಪಾತಕ್ಕೆ ಹೋಲಿಸಬೇಕು ಎನ್ನುತ್ತೀಯೇನು. ಛೆ! ನಮ್ಮ ಜೋಗಕ್ಕೆ ಅವಮಾನಮಾಡಿದಂತಾಗುತ್ತದೆ. ಪ್ರಕೃತಿ ಸೌಂದರ್ಯದ ಬೀಡು ಜೋಗದ ಜಲಪಾತ. ಶರಾವತಿಯ ಮಡಲಿನಲ್ಲಿ ನೈಸರ್ಗಿಕ ಸಂಪತ್ತು ದತ್ತವಾಗಿ ಬಂದಿದೆ ಜೋಗದ ಜಲಪಾತಕ್ಕೆ. ಈ ದೃಷ್ಟಿಯಲ್ಲಿ ಜೋಗಕ್ಕೂ ನಯಾಗರಕ್ಕೂ ಅಜಗಜಾಂತರ.

೨೦೦೦ ಮೈಲಿ ಬಸ್ಸು ಪ್ರವಾಸ ಮುಗಿಸಿಕೊಂಡು ನಿನ್ನೆ ಇಲ್ಲಿಗೆ ಬಂದೆ. ನಿನ್ನ ಪತ್ರಗಳೆಲ್ಲಾ ನನಗಾಗಿ ಕಾದಿದ್ದುವು. ನನ್ನ ಪುಸ್ತಕದ ಬಗ್ಗೆ ಭಾರತದಲ್ಲಿ ಬಂದ ಅಭಿಪ್ರಾಯವನ್ನು ಕೇಳಿ ಸಂತೋಷವಾಯಿತು.

ಜೂನ್ ೨೦ನೆಯ ತಾರೀಖು ರಿಪಬ್ಲಿಕನ್ ರಾಷ್ಟ್ರಕೂಟದಲ್ಲಿ ಭಾಗಿ ಯಾಗಲು ಭಾರತದ ಪತ್ರಿಕಾ ಪ್ರತಿನಿಧಿಯಾಗಿ ಫಿಲಡೆಲ್ಫಿಯಾ ನಗರಕ್ಕೆ ಹೋಗಲಿದ್ದೇನೆ.

ದೊಡ್ಡಕಾಗದ ಬರಿ, ದೊಡ್ಡಕಾಗದ ಬರಿ ಯೆಂದು ಪ್ರತಿಸಲವೂ ಬರೆಯುತ್ತಿದ್ದೆಯಲ್ಲ. ಈ ಕಾಗದದಿಂದ ನಿನಗೆ ತೃಪ್ತಿಯಾಯಿತೇನಯ್ಯ.

ಪ್ರೀತಿಯಿರಲಿ.

ಇತಿ ಹೀಗೆ,

ನಾಕೃಮೂ.

—:o:—

## ಮೂವತ್ತೊಂಬತ್ತು

ಬೊಂಬಾಯಿ,

೨-೬-೪೮.

ಅಣ್ಣ ನಾಡಿಗ,

ನನ್ನ ಹಿಂದಿನ ಕಾಗದ ಬಂದಿರಬೇಕು. ಅದರಲ್ಲಿ ನಿನ್ನ ಪುಸ್ತಕದ ಮೇಲೆ ಬಂದ ವಿಮರ್ಶೆಯನ್ನು ಇಟ್ಟಿದ್ದೆ.

ಆ ಕಾಗದದಲ್ಲಿ ನಾ ಹೇಳಿದ್ದೆ "ಇದೇ ನಿನಗೆ ಅಮೇರಿಕಾಕ್ಕೆ ನಾನು ಬರೆಯುವ ಕಡೆಯ ಕಾಗದವಿರಬಹುದು" ಎಂಬುದಾಗಿ. ಈ ಕಾಗದಕ್ಕೆ ಮತ್ತೆ ಅದೇ ಒಕ್ಕಣೆ ಹಾಕಬೇಕು. ಏಕೆಂದರೆ ನೀನು ಸೆಂಟ್‌ಲೂಯಿಸ್‌ಸಿಂದ ಬರೆದ ಕಾಗದದಲ್ಲಿ "ಇದು ತಲಪಿದೊಡನೆ ಬರೆದೇ ತೀರಬೇಕೆಂದು" ಆಗ್ರಹದ ಆಣತಿಯಿತ್ತಿದ್ದೀ ಅದನ್ನು ಹೇಗೆ ಮೀರಲಿ? ಆದ್ದರಿಂದ ಬರೆಯುವುದಕ್ಕೆ ಹೆಚ್ಚಾಗಿ ಇಲ್ಲದಿದ್ದರೂ ಬರೆಯು ತ್ತಿದ್ದೀನಿ.

ಇನ್ನೊಂದು ಸುದ್ದಿ. ನಿನ್ನ ಸೆಕ್ರೆಟರಿ ಎಂ. ವಿ. ಕೃಷ್ಣಸ್ವಾಮಿ ಸೆಪ್ಟೆಂಬರಿನಲ್ಲಿ ಇಂಗ್ಲೆಂಡಿಗೆ ಹೋಗುತ್ತಾನಂತೆ. ವಿದ್ಯಾಭ್ಯಾಸದ ಚಲನ ಚಿತ್ರ ತಯಾರಿಕೆಯಲ್ಲಿ ಪರಿಶ್ರಮ ಪಡೆದುಕೊಂಡು ಬರುವ ಉದ್ದಿಶ್ಯ ವಂತೆ.

ಶ್ರೀ. ಬಿ. ಜಿ. ಎಲ್ ಸ್ವಾಮಿ ಇನ್ನು ಅಮೇರಿಕಾದಲ್ಲೇ ಇದ್ದಾನೋ? ಅಥವಾ ಆಗಲೇ ಹಿಂದಿರುಗಿದನೋ? ನೀನು ಶ್ರೀ. ಆರ್. ಡಿ. ಚಾರ್, ಇರುವ ಚಿತ್ರದಲ್ಲಿನ ಮೂರನೆಯವರು ಶ್ರೀ. ಕೆ. ನಾಗರಾಜರಾವ್ ಎಂ. ಎಸ್. ಸಿ., ಬಿ. ಟಿ., ತಾನೇ? ನಾನು ಕಾಲೇ ಜಲ್ಲಿ ಕೊನೆಯ ವರ್ಷ ಓದುತ್ತಿದ್ದಾಗ ಅವರು ಬಿ. ಟಿ. ಯಲ್ಲಿದ್ದರು. ನನ್ನ ನೆನಪು ಅವರಿಗುಳಿದಿರಲಾರದು.

ಶ್ರೀ. ಡಿ. ಎಂ. ಸಿದ್ದಯ್ಯನಿಗೆ ಮದುವೆ ಆಯಿತು. ಒಂಭತ್ತು ತಿಂಗಳ ಹಿಂದೆ ನಮ್ಮ ಮೈಸೂರು ಮಂತ್ರಿಮಂಡಲದವರು ಯಾವ ಕರ್ತವ್ಯವನ್ನು ಮಾಡಬೇಕಾಗಿತ್ತೋ ಅದನ್ನು ಈಗಲಾದರೂ ಮಾಡುವ ರಂತೆ. ಆರ್ಕಾಟ್ ಮೊದಲಿಯಾರ್‌ಗೆ ದಖ್ಖಲ್‌ಪಟ್ಟೆ ಕೊಡಲಿದ್ದಾರಂತೆ.

ಅಮೇರಿಕೆಯ ನಿನ್ನ ಅನುಭವಗಳನ್ನು ಆಗಿಂದಾಗ್ಗೆ ಕನ್ನಡದಲ್ಲಿ ಗುರುತು ಹಾಕಿಕೊಳ್ಳುತ್ತಿದ್ದೆಯಷ್ಟೆ? ಇಲ್ಲಿಗೆ ಬರುವವೇಳೆಗೆ ಒಂದೆರಡು ಪುಸ್ತಕಕ್ಕೆ ಸರಕು ತಯಾರುಮಾಡಿಕೊ. ಒಂದರಲ್ಲಿ ಅಮೇರಿಕಾ ದೇಶದ ಭೂಮಿಯ, ಜನದ ಲಕ್ಷಣಗಳು, ನಡೆನುಡಿಯ ವೈಚಿತ್ರ್ಯಗಳು, ಇವಿರಲಿ.

ಇನ್ನೊಂದರಲ್ಲಿ "ಅಮೇರಿಕದಲ್ಲೊಬ್ಬ ಭಾರತ ತರುಣ" ನ ಅನುಭವ ಸ್ಮರಣ ವಿರಲಿ.

ಈಗ ನಾನೂ ಸಂಜೀವನೂ **Les Miserables** ಚಿತ್ರಕ್ಕೆ ಹೊರ ಟಿದ್ದೇವೆ.

ನಿನ್ನವ,
ಶೌರಿ.

—:o:—

## ನಲವತ್ತು

ಲಂಡನ್,
೧೪—೭—೪೮.

ಚಿ॥ ಶಾರದಾ ಪ್ರಸಾದ್ :

ಶ್ವೇತನಾಡಿನಿಂದ ಸಾಮ್ರಾಜ್ಯನಾಡಿಗೆ ಬಂದಿದ್ದೇನೆ. ಜುಲೈ ಎರಡ ನೇ ತಾರೀಖು ನ್ಯೂಯಾರ್ಕನ್ನು ಬಿಟ್ಟೆ. **ಮೇರಿನ್ ಎಸ್. ಎಸ್. ಫ್ಲ್ಯಾಷರ್** ಎಂಬ ಹಡಗು ೯ ದಿನಗಳ ನಂತರ ನನ್ನನ್ನು ಇಂಗ್ಲೆಂಡ್ ದೇಶಕ್ಕೆ ತಂದು ಬಿಟ್ಟಿತು. ಹನ್ನೆರಡನೆಯ ತಾರೀಖಿನಿಂದ ನಮ್ಮ ಅಭ್ಯಾಸ ಪ್ರಾರಂಭವಾಗಿದೆ. ಆಕ್ಸ್‌ಫರ್ಡ್‌ಗೆ ಬದಲು ಲಂಡನ್ ವಿಶ್ವ ವಿದ್ಯಾನಿಲಯವನ್ನು ಆರಿಸಿಕೊಂಡೆ. ಇಂಗ್ಲೀಷು ಸಾಹಿತ್ಯ ಮತ್ತು ಸಾಮಾಜಿಕ ಜೀವನ ಎಂಬುದೇ ಅಭ್ಯಾಸದ ವಿಷಯ. **Tutorial System** ನ ತರಹ ಅಭ್ಯಾಸ ಕ್ರಮವಿಲ್ಲಿ. ಬೆಳಿಗ್ಗೆ ಕಾಲೇಜಿಗೆ ಹೋಗ ಬೇಕು. ಮಧ್ಯಾಹ್ನ ನಾನಾ ಸಂಸ್ಥೆಗಳಿಗೆ ಭೇಟಿ ಕೊಡಬೇಕು.

ನಮ್ಮ ದೇಶದ ಸರಕಾರದ ಪ್ರತಿನಿಧಿಯಾಗಿರುವ ಶ್ರೀ. ಕೃಷ್ಣ ಮೆನನ್ನರವರನ್ನು ಭೇಟಿ ಮಾಡಿ ನನ್ನ ಪುಸ್ತಕವೊಂದನ್ನು ಕೊಟ್ಟೆ. ಹಸನ್ಮುಖಿಗಳಾಗಿ ಚೆನ್ನಾಗಿ ಮಾತನಾಡಿಸಿದರು.

ಲಂಡನ್ನಿಗೂ ಮತ್ತು ನ್ಯೂಯಾರ್ಕಿಗೂ ವಿಪರೀತ ವ್ಯತ್ಯಾಸ ಕಾಣುತ್ತದೆ. ಇಲ್ಲಿ ಹೊಟ್ಟೆ ತುಂಬಲು ಸಾಕಷ್ಟು ಆಹಾರವಿಲ್ಲ. ಸಾಕಷ್ಟು

ಬಟ್ಟೆಯಿಲ್ಲ. ಸೌಖ್ಯವೂ ಇಲ್ಲ. ಯುದ್ಧದ ಪರಿಣಾಮ ಇವರ ಮೇಲೆ ಚೆನ್ನಾಗಿ ಆಗಿದೆ. ಆದರೆ ಈ ಜನರಲ್ಲಿ ಕೆಚ್ಚಿದೆ. ಮುಖದ ಮೇಲೆ ಕಳೆಯಿದೆ. ಕಷ್ಟ ಸಹಿಷ್ಣುತೆಯನ್ನು ಕಾಣಬಹುದು. ಲಂಡನ್ ನಗರ ದಲ್ಲೆಲ್ಲಾ ಬಾಂಬಿನ ಸಿಡಿತದಿಂದ ಸುಟ್ಟು ಭಸ್ಮವಾದ ಪ್ರದೇಶಗಳು ಅಲ್ಲಲ್ಲಿ ಕಾಣುತ್ತವೆ. ಒಂದೊಂದು ಸಲ ಈ ಜನರನ್ನು ನೋಡಿದರೆ ಮನಸ್ಸು ಕರಗುತ್ತದೆ. ಆದರೆ ೧೫೦ ವರ್ಷಗಳ ವರೆಗೆ ನಮ್ಮ ದೇಶವನ್ನು ಗುಲಾಮಗಿರಿಯಲ್ಲಿಟ್ಟದ್ದ ಅಂಶವನ್ನು ನೆನೆದುಕೊಂಡರೆ ಇವರಿಗೆ ಸಹಾನುಭೂತಿ ತೋರಿಸುವುದು ಸರಿಯೇ ಎನ್ನಿಸುತ್ತದೆ.

ಜುಲೈ ೨೬ ನೆಯ ತಾರೀಖು ಇಂಗ್ಲೆಂಡಿನ ವೃದ್ಧಪಿತಾಮಹ ಜಾರ್ಜ್ ಬರ್ನಾರ್ಡ್ ಷಾರವರನ್ನು ನೋಡಲು ಹೋಗುವೆನು. ಅಂದು ಅವರ ಹುಟ್ಟಿದ ಹಬ್ಬ.

ನನ್ನ ಹಣಕಾಸಿನ ಪರಿಸ್ಥಿತಿ ಈಗ ಬಿಗಡಾಯಿಸಿಕೊಂಡಿದೆ. ಊರಿಗೆ ಬರಲು ಹಣವೇ ಇಲ್ಲ. ನನಗೊಂದು ಸಾವಿರ ರೂಪಾಯಿ ಬೇಕು. ಯಾರು ಸಹಾಯ ಮಾಡುವರಪ್ಪಾ! ಈ ಪರದೇಶಗಳಲ್ಲಿ ಹಣವಿಲ್ಲದಿದ್ದರೆ ನಿಜವಾಗಿಯೂ ಪರದೇಶಿಯೇ. ಓ! ಮರೆತೆ. ದಯ ವಿಟ್ಟು ನನ್ನ ಬ್ಯಾಂಕಿಗೆ ಹೋಗಿ ನನ್ನ ಲೆಕ್ಕದಲ್ಲಿ ಎಷ್ಟು ಉಳಿದಿದೆ. ತಿಳಿದು ಬರಿ.

ಇತಿ ಹೀಗೆ,
ನಾಕ್ರಮೂ.

—:o:—

## ನಲವತ್ತೊಂದು

ಬೊಂಬಾಯಿ,
೧೭—೭—೪೮.

ಅಣ್ಣ ನಾಡಿಗ:

ಫಿಲಡೆಲ್ಫಿಯಾ ಕಾಗದ ಜೂನ್ ೨೩ ರಂದು ಬರೆದ ಮೇಲೆ ಮತ್ತೆ ನೀನು ಬರೆದೇ ಇಲ್ಲ. ಜುಲೈ ೨ರಂದು ಇಂಗ್ಲೆಂಡಿಗೆ ತೆರಳುವೆನೆಂದು

ಬರೆದಿದ್ದು ಅಲ್ಲಿಗೆ ತಲಪಿದ್ದಕ್ಕೆ ಕಾಗದವೇ ಹಾಕಿಲ್ಲವಲ್ಲ, ನ್ಯಾಯವೇ ಹೇಳು. ಹತ್ತು ದಿನದಿಂದ ನಿತ್ಯವೂ ನಿನ್ನ ಕಾಗದದ ದಾರಿ ಕಾಯು ತ್ತಿದ್ದೇನೆ. ಬೇಗ ಬರೆಯಪ್ಪಾ, ನಿನ್ನ ಜಗತ್ಪರ್ಯಟನದಲ್ಲಿ ನಮ್ಮನ್ನು ಉಪೇಕ್ಷಿಸಬೇಡ.

ಏನೆನ್ನುತ್ತದೆ ಇಂಗ್ಲೆಂಡು? ಮೊನ್ನೆಯವರೆಗೆ ನಮ್ಮನ್ನು ಪಂಜರದ ಸಲಾಕಿಗಳ ಹಿಂದಿಟ್ಟ ದೇಶ. ಅದರ ಜನ ಹೇಗಿದ್ದಾರೆಂಬುದನ್ನು ವಿವರಿಸಿ ಬರೆ.

ಆರೋಗ್ಯ ಹೇಗಿದೆ? ಅಟ್ಲಾಂಟಿಕ್ ಹೇಗಿತ್ತು? ನಿನಗೆ ಪೆಸಿ ಫಿಕ್ ಇಷ್ಟವಾಯಿತೋ? ಅಟ್ಲಾಂಟಿಕ್ ಇಷ್ಟವಾಯಿತೋ?

ನಿನ್ನ ಪುಸ್ತಕದ ವಿಮರ್ಶೆ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಪ್ರಕಟ ವಾಯಿತು. ನಮ್ಮ ಪೇಪರಿನಲ್ಲಿ ಹಾಕಿದ್ದೆವಲ್ಲ ಅದನ್ನೂ ಕೊಂಚ ಸಂಗ್ರಹ ಮಾಡಿ ಹಾಕಿದ್ದರು.

ಶ್ರೀ. ಆಳ್ವ ಈಗ ಜೇಕೋಸ್ಲೋವೇಕಿಯಾ ಗೆ ಹೋಗಿದ್ದಾರೆ. ಆತ ಹಿಂದಿರುಗುವಾಗ ಲಂಡನ್‌ಗೆ ಬಂದಾರು. ನೀ ಕಾಣಬಹುದು.

ಸಂಜೀವ ಎಂದಿನಂತೆ.

ಹೀಗೆ,
ಶೌರಿ.

—:o:—

## ನಲವತ್ತೆರಡು

ಲಂಡನ್,
೨೩—೭—೪೮.

ಚಿ|| ಶೌರಿ,

ಈ ವೇಳೆಗೆ ನನ್ನ ಕಾಗದ ನಿನಗೆ ತಲ್ಪಿರಬಹುದಲ್ಲವೇ? ನಿನ್ನ ೧೭ ರ ಕಾಗದ ನಿನ್ನೆ ಬಂದಿದ್ದರೂ ಇಂದು ನನ್ನ ಕೈ ಸೇರಿತು. ನೋಡು, ಒಂದು ಮಾತು ಶೌರಿ. ನನ್ನ ಚಲನ ವಲನಗಳ ಬಗ್ಗೆ ತಪ್ಪದೆ ನಿನಗೆ

ಕಾಗದ ಬರೆಯುತ್ತಿದ್ದರೂ ಕಾಗದವೇ ಇಲ್ಲವೆಂದು ಹೇಳುವುದು ಸರಿಯೇ? ಉಪೇಕ್ಷೆ ನಾ ಎಂದೂ ಮಾಡುವುದಿಲ್ಲವಣ್ಣಾ.

ಇಂಗ್ಲಿಷ್ ಜನ ಎಂದಿನಂತೆಯೇ. ನಮ್ಮನ್ನು ಇನ್ನೂ ಗುಲಾಮಗಿರಿ ಭಾವನೆಯಿಂದಲೇ ನೋಡುತ್ತಾರೆ. ಎಲ್ಲರೂ ಹಾಗಲ್ಲ. ಈ ಜನಕ್ಕೆ ಉಳಿದೆಲ್ಲ ಪರಕೀಯ ಜನಾಂಗಗಳ ಮೇಲೂ ಒಂದು ತರಹೆಯ ಹೆಮ್ಮೆ. ಸವಿ ಮಾತು. ಬಿಗಿ ಹೃದಯ. ಹಾಗೆಂದೇ ಸಾಮ್ರಾಜ್ಯ ಕಟ್ಟಿದರಲ್ಲವೇ! ಯುದ್ಧದ ಬಿಸಿ ತಗಲಿ ಜನ ಬಳಲಿ ಬೆಂದು ಹೋಗಿದ್ದಾರೆ. ಆ ಸಾಮ್ರಾಜ್ಯ ಸೂರ್ಯನ ವೈಖರಿ ಇಂದಿಲ್ಲ, ಲಂಡನ್ನಿಗೆ— ಇಂಗ್ಲೆಂಡಿಗೆ. ಆಹಾರ, ಬಟ್ಟೆ ಸೌಕರ್ಯ, ಎಲ್ಲ ರೀತಿಗಳಲ್ಲಿಯೂ ಕಷ್ಟವಿದೆ. ಆದರೂ ಇಂಗ್ಲಿಷ್ ಜನ ಕಲ್ಲೆದೆಯವರು. ಧೈರ್ಯದಿಂದ ಆ ಕಷ್ಟಗಳನ್ನು ಬಿಗಿ ಮುಖದಿಂದ ಭರಿಸುತ್ತಿರುವರಲ್ಲ. ಅದೇ ಈ ಜನರ ಜೀವನದ ಗುಟ್ಟು.

ನನ್ನ ಆರೋಗ್ಯ ತುಂಬಾ ಚೆನ್ನಾಗಿದೆ. ಅಮೇರಿಕದ ದಂಡೆ ಬಿಟ್ಟಾಗ ೧೬೨ ಪೌಂಡಿದ್ದೆ. ಇಲ್ಲಿ ನಿನ್ನೆ ತೂಕ ಮಾಡಿದಾಗ ೧೪೦ ಪೌಂಡಾಗಿದ್ದೇನೆ. ಭಾರತಕ್ಕೆ ಬರುವ ವೇಳೆಗೆ ನನಗೆ ಹಿಂದಿದ್ದ ೧೨೪ ಪೌಂಡೇ ಇರುವುದೋ ಏನೋ?

ನಿಜಕ್ಕೂ ಅಟ್ಲಾಂಟಿಕ್ ಸಾಗರದ ಪ್ರಯಾಣ ತುಂಬಾ ಹಿತಕರವಾಗಿತ್ತು. ಸ್ನೇಹಿತರೂ ಹಾಗಿದ್ದರು. ಸಾಗರವೂ ಶಾಂತವಾಗಿತ್ತು. ೯ ದಿನಗಳ ನಮ್ಮ ಪ್ರಯಾಣ ಆಹ್ಲಾದಕರವಾಗಿತ್ತು. ಹಡಗಿನ ಪ್ರಯಾಣಿಕರಿಗೆ ಎರಡು ದಿನ ಭಾಷಣ ಮಾಡಿದೆ. ನನ್ನ ಪುಸ್ತಕಗಳನ್ನೂ ಮಾರಿದೆ.

ಸುಪ್ರಸಿದ್ಧವಾದ **ಆಕ್ಸ್‌ಫರ್ಡ್‌ಗೆ** ಹೋಗಿದ್ದೆ. ನಾನಾ ಕಾಲೇಜುಗಳನ್ನು ನೋಡಿದೆ. **ಆಲ್ ಸೌಲ್ಸ್** ಕಾಲೇಜಿಗೆ ಹೋಗಿದ್ದೆ. ಅಲ್ಲಿ **ವೇದಾಂತಿ ರಾಧಾಕೃಷ್ಣ**ರನ್ನು ಭೇಟಿ ಮಾಡಿದೆ. ನಾಳೆ ಶನಿವಾರ ಕೇಂಬ್ರಿಡ್ಜ್‌ಗೆ ಹೋಗುವೆ. ಅಲ್ಲಿ ಭರತರಾಜಸಿಂಗ್, ನರಶಿಂಹಯ್ಯ ಇದಾರೆ.

ಜುಲೈ ೨೬ ಕ್ಕೆ ಜಿ. ಬಿ. ಎಸ್. ಹುಟ್ಟಿದ ದಿನ. ಅಂದು ಅವರನ್ನು ನೋಡುವೆ.

ಶ್ರೀ ಹೆನ್ರಿ ದೇವದಾಸ್ ಗೊತ್ತಲ್ಲ — ವೈ ಎಂ. ಸಿ. ಎ. ಆತ ಇಲ್ಲಿಗೆ ಬಂದಿದಾನೆ. ಒಂದು ವರ್ಷದಿಂದ ಇಲ್ಲೆ ಇದಾನಂತೆ. ನಾಳೆಯ ವರ್ಷ ಅಮೇರಿಕೆಗೆ ಹೋಗುತ್ತಾನಂತೆ.

ಮೊನ್ನೆ ಶ್ರೀಮತಿ ರಾಜಕುಮಾರಿ ಅಮೃತ ಕೌರ್‌ರವರಿಗೆ ಭಾರತದ ಲೀಗಿನವರು ಒಂದು ಸ್ವಾಗತ ಕೊಟ್ಟರು. ಬ್ರಿಟಿಷ್ ಪತ್ರಿಕೆಗಳಲ್ಲಿ ಅದರ ಗಂಧವೇ ಬರಲಿಲ್ಲ. ಇಂಗ್ಲಿಷ್ ಸುದ್ದಿಗಾರರೇ ಬಂದಿರಲಿಲ್ಲ ಸಭೆಗೆ.

ಹೈ ಕಮಿಷನರ್ ಮೆನನ್ನರನ್ನು ಪುನಃ ಭೇಟಿಮಾಡಿದ್ದೆ. ಒಳ್ಳೆಯ ಮನುಷ್ಯ. ತುಂಬ ಸರಳ. ಜನಾನುರಾಗಿ. ಇಲ್ಲಿ ಆಗಸ್ಟ್ ೧೫ಕ್ಕೆ ದೊಡ್ಡ ಪ್ರದರ್ಶನ ನಡೆಯುತ್ತದೆ. ಎಂಟುಸಾವಿರ ಜನರ ಮೆರವಣಿಗೆ. ಲಾರ್ಡ್ ಮೌಂಟ್ ಬೇಟನ್, ಕ್ರಿಪ್ಸ್, ವೇವಲ್ ಮುಂತಾದವರು ಮಾತನಾಡುತ್ತಾರೆ. ಹೋದ ವರ್ಷ ಸ್ವಾತಂತ್ರ್ಯ ಬಂದಾಗ ಅಮೇರಿಕೆಯಲ್ಲಿದ್ದೆ. ಈ ವರ್ಷ ಇಲ್ಲಿ. ನನಗೆ ಆ ಸವಿಯನ್ನು ತಾಯ್ನಾಡಿನಲ್ಲಿ ಸವಿಯುವ ಭಾಗ್ಯ ಮುಂದಿನ ವರ್ಷ ಬರಬಹುದೇನೋ!

ಸಂಜೀವನ ಜೀವನ ಅಮೃತವಾಗಿದೆಯೇ? ಆತನೇಕೆ ಕಾಗದವೇ ಬರೆಯುತ್ತಿಲ್ಲ? ನಾನಂತೂ ಬರೆದು ಬರೆದು ಸೋತೆ. ನೀನಾದರೂ ಹೇಳಬಾರದೇ?

ಶ್ರೀ. ಭಾಷ್ಯಂ ಇಲ್ಲಿಗೆ ೨೦ಕ್ಕೆ ಬರುತ್ತಾರೆ. ಕಾಣುವೆ.

ನಮ್ಮ ಕಾರ್ಯದರ್ಶಿ ಕಿಟ್ಟಿ ಇಲ್ಲಿಗೆ ಬರುತ್ತಾನಾಗಿ ಹೆನ್ರಿ ಹೇಳಿದ. ನಿಜವೇನು? ಆನಂದ ಎಲ್ಲಿದಾನೆ? ವರದನು ಮೈಸೂರಲ್ಲಿಯೇ ಇರುವನೇನು?

ಇತಿ ಹೀಗೆ,

ಕೃಷ್ಣ.

—:o.—

## ನಲವತ್ಮೂರು

ಎಡಿನ್‌ಬರೋ,
೧೧—೮—೪೮.

ಅಯ್ಯಾ ಶೌರಿ :

ನಾನೀಗ ಲಂಡನ್ನಿಗೆ ಹೊಂದಿಕೊಂಡಿದ್ದೇನೆ. ಸಂಜೀವನಿಗೆ ಬರೆದ ಕಾಗದ ಬಂದಿತೆಂದು ನೀನು ಬರೆಯಬೇಕೇ? ಆತ ಮೂರು ಮಾತು ನನಗೆ ಬರೆಯ ಬಾರದೇ?

ಅಯ್ಯಾ, ಈ ಪಾಶ್ಚಿಮಾತ್ಯ ದೇಶಗಳಲ್ಲಿ ಕಾಣಬರುವ ಬಹಿರಂಗ ಅನೈತಿಕತೆಯನ್ನು ಕಂಡು ಬೆರಗಾಗಿದ್ದೇನೆ. ಅಮೇರಿಕೆಯಲ್ಲಿ ನೀತಿಯ ಪತನ ಪರದೆಯ ಹಿಂದೆ. ಲಂಡನ್ನಿನಲ್ಲಿ ಬಹಿರಂಗವಾಗಿ. ಯುದ್ಧ ಮುಕ್ತಾಯವಾದ ಮೇಲೆ ಯೂರೋಪ್ ದೇಶದಲ್ಲೆಲ್ಲಾ ನೈತಿಕ ಮಟ್ಟ ಕೆಳಗಿಳಿದು ಹೋಗಿದೆ. ಯೂರೋಪಿಯನ್ ಜನಾಂಗಗಳ ಅಧಃಪತನ ಈ ಅನೀತಿಯ ಫಲವಾಗಿಯೋ ಏನೋ?

ನಾಲ್ಕು ದಿನಗಳ ವರೆಗೆ ನಮ್ಮ ನಾಡಿನ ಸಚಿವರಾದ **ಶ್ರೀ ಭಾಷ್ಯಂ**ರೊಂದಿಗೆ ತಿರುಗಾಡಿದೆ. ಲಂಡನ್ನಿನಲ್ಲಿ ಭಾರತೀಯ ವಿದ್ಯಾರ್ಥಿ ಸಂಘದಾಶ್ರಯದಲ್ಲಿ ಶ್ರೀ ಭಾಷ್ಯಂರವರ ಭಾಷಣ ಮಾಡಿಸಿದೆ. ಸಭೆಗೆ ಅವರ ಪರಿಚಯ ನಾನೆ ಮಾಡಿಕೊಟ್ಟೆ. ಚೆನ್ನಾಗಿ ಮಾತನಾಡಿದರು.

**ಜಾರ್ಜ್ ಬರ್ನಾರ್ಡ್ ಷಾ** ರವರನ್ನು ನೋಡಲು **ಸೆಂಟ್ ಲಾರೆನ್ಸ್** ನಲ್ಲಿರುವ **ಅಯಟ್‌ಗೆ** ಹೋಗಿದ್ದೆ. ಅಂದು ಸಂಜೆ ಅವರು ತೋಟದಲ್ಲಿ ಕುಳಿತುಕೊಂಡಿದ್ದರು. ನನ್ನ ಪುಸ್ತಕವೊಂದನ್ನು ಅವರ ಹುಟ್ಟಿದ ಹಬ್ಬಕ್ಕೆ ಬಹುಮಾನವಾಗಿ ಕೊಟ್ಟೆ. ಮುಗುಳ್ನಗೆಯಿಂದ ಸ್ವೀಕರಿಸಿದರು ಅಷ್ಟೆ. ಮಾತನಾಡಲಿಲ್ಲ. ಪಕ್ಕದಲ್ಲಿಯೇ ಅವರ ಕಾರ್ಯದರ್ಶಿನಿ ಕುಳಿತಿದ್ದರು. ಮುದುಕನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರೆ.

ಲಂಡರ್ನ ವಿಶ್ವವಿದ್ಯಾನಿಲಯದ ನಮ್ಮ ಅಭ್ಯಾಸವು ೬ ನೇ ತಾರೀಖಿಗೆ ಮುಗಿಯಿತು. ಪರೀಕ್ಷೆಯೂ ಆಯಿತು. ತೇರ್ಗಡೆ ಹೊಂದಿದ್ದೇನೆ.

ಎಂಟನೆಯ ತಾರೀಖು ಲಂಡನ್ನಿನಿಂದ ಹೊರಟು **ಮ್ಯಾಂಚೆಸ್ಟರಿಗೆ** ಬಂದೆ. ಹಡಗಿನಲ್ಲಿ ಬರುವಾಗ **ಶ್ರೀಮತಿ ಬಾರ್ಬಾರ** ಎಂಬುವಳ ಪರಿಚಯವಾಗಿತ್ತು. ಅವಳ ಆಹ್ವಾನದ ಮೇಲೆಯೇ ನಾನು ಮ್ಯಾಂಚೆಸ್ಟರಿಗೆ ಹೊರಟಿದ್ದು, ಅಹಮದಾಬಾದಿನಂತೆ ಇದು ಬರೀ ಗಿರಣೀಗರ ನಗರ. ಯಾವಾಗಲೂ ಹೊಗೆಯಾಡುತ್ತಿರುತ್ತದೆ. ಹಗಲೂ ಕಪ್ಪಾಗಿ ಕತ್ತಲು ಕವಿದಿರುತ್ತದೆ. ಬಿಸಿಲು ಎಂಬುವದು ವರ್ಷಕ್ಕೆ ನಾಲ್ಕೈದು ಸಲ ಬರುತ್ತದಂತೆ. ಯಾವಾಗಲೂ ಮಳೆ, ಮೋಡ ಕವಿದಿರುತ್ತದೆ. ನಾನೂ ಆಕೆಯೂ ಮ್ಯಾಂಚೆಸ್ಟರಿನ ಕೂಲಿಕಾರರ ವಸತಿಗಳನ್ನು ನೋಡುವುದಕ್ಕೆ ಹೋಗಿದ್ದೆವು. ಅಲ್ಲೊಬ್ಬ ಕಮ್ಯೂನಿಸ್ಟ ಸಿಕ್ಕಿದ್ದ. ಆತನ ಹೆಸರ್ **ರಾಬರ್ಟ್‌ಕೀಲ್** ಎಂದು. ಹೈದರಾಬಾದಿನ ತೊಡಕಿಗೆ ಬ್ರಿಟಿಷ್ ಸರ್ಕಾರವನ್ನೇ ಟೀಕಿಸಿದ.

**ಎಡಿನ್‌ಬರೋ** ಸುಂದರವಾದ ನಗರ. ಇಡೀ **ಸ್ಕಾಟ್ಲೆಂಡೇ** ಹಾಗೆ. ಇಲ್ಲಿಯ ಜನರು ತುಂಬಾ ಒಳ್ಳೆಯವರು. ಭಾರತೀಯರನ್ನು ಕಂಡರೆ ವಿಶೇಷವಾಗಿ ಆದರಿಸುತ್ತಾರೆ. ಇಲ್ಲಿಯ ರಸ್ತೆಗಳು ಚೊಕ್ಕಟವಾಗಿಯೂ, ಅಂದವಾಗಿಯೂ ಇವೆ. ಪ್ರಕೃತಿ ದೇವಿ ಒಲಿದಿದ್ದಾಳೆ. ಊರಿನ ಮಧ್ಯೆ **ಮೇರಿಯ** ಕೋಟೆಯಿದೆ. **ಹೋಲಿರೀಡ್** ಅರಮನೆ ಇದೆ. ಎಡಿನ್ ಬರೋ ನಗರಕ್ಕೆ ನಾ ಮನಸೋತು ಹೋದೆ.

ಎಡಿನ್‌ಬರೋ ವಿಶ್ವವಿದ್ಯಾನಿಲಯಕ್ಕೂ ಹೋಗಿದ್ದೆ. **ಸರ್ ವಾಲ್ಟರ್ ಸ್ಕಾಟನ** ಮತ್ತು **ಆಡ್ಯಮ್‌ಸ್ಮಿತ್** ನ ಸಮಾಧಿಗಳನ್ನು ನೋಡಿಕೊಂಡು ಬಂದೆ.

ನಾವಿಕ ಕೇಂದ್ರವಾದ **ಗ್ಲಾಸ್ಗೋ** ನಗರಕ್ಕೆ ಮೋಟಾರಿನಲ್ಲಿ ಹೋಗಿದ್ದೆ. ಇಲ್ಲಿ ಸಾವಿರಾರು ಭಾರತೀಯ ನಾವಿಕರು ತರಬೇತಿಗೋಸ್ಕರ ಬಂದಿದ್ದಾರೆ.

ನಾಳೆ **ನ್ಯೂ ಕ್ಯಾಸಲ್‌ಗೆ** ಕಲ್ಲಿದ್ದಲನ್ನು ಹೊತ್ತುಕೊಂಡು ಹೋಗುವೆನು. **ಯಾರ್ಕ್**ಗೆ ಭೇಟಿಕೊಟ್ಟು ಮರಳಿ ಲಂಡನ್ನಿಗೆ ತೆರಳುತ್ತೇನೆ. ಸ್ವಾತಂತ್ರ್ಯದ ದಿನದ ವರ್ಷೋತ್ಸವಕ್ಕೆ ಇಕೋ ನಿನಗೆ ಶುಭಾಶಯಗಳು.

ನಿನ್ನವ,

ಕೃ.

—:o:—

## ನಲವತ್ನಾಲ್ಕು

ಬೊಂಬಾಯಿ.

೧೫-೮-೪೮

ಅಣ್ಣ ನಾಡಿಗ,

ಪವಿತ್ರ ದಿನವಿದು. ನಿನಗೆ ಕಾಗದ ಬರೆಯುತ್ತಿದ್ದೇನೆ. ಒಂದು ವರ್ಷವಾಯಿತು, ಸ್ವತಂತ್ರರಾಗಿ ನಾವು. ನಮ್ಮ ಕನಸಿನ ಮೊದಲನೆಯ ಭಾಗಮಾತ್ರ ಕೈಗೂಡಿತಾದರೂ, ಏತಕ್ಕಾಗಿ ಸ್ವಾತಂತ್ರ್ಯಬೇಕೆಂದು ಕೇಳಿದೆವೋ ಅದನ್ನು ಸಾಧಿಸಲು ತೊಡಗಿದ್ದೇವೆಂದು ತೋರಿಸುವ ಕಾರ್ಯಕ್ರಮವನ್ನಿನ್ನೂ ಕೈಗೊಂಡಿಲ್ಲ. ಆದರೆ ನಾವು ರಾಷ್ಟ್ರವಾಗಿ ತಲೆಯೆತ್ತಿ ನಿಂತಿರುವ ಹೆಚ್ಚಳಿಕೆಯಲ್ಲಿ ನಮ್ಮ ಲೋಪದೋಷಗಳನ್ನೆಲ್ಲಾ ಮರೆಯಲು ಸಾಧ್ಯವುಂಟು.

ಕಳೆದ ವರ್ಷ ಈದಿನ ನೀನು **ಅಮೇರಿಕೆಯ**ಲ್ಲಿದ್ದೆ. ಈ ವರ್ಷ **ಇಂಗ್ಲೆಂಡಿನಲ್ಲಿ**ರುವೆ. ಮುಂದಿನ ವರ್ಷ **ಜರ್ಮಾನ**ಲ್ಲೋ **ಚೈನಾದ**ಲ್ಲೋ ಇರದೆ, ನಮ್ಮ **ಭಾರತದಲ್ಲೇ** ಇರು. ಇದೋ ಸ್ವಾತಂತ್ರ್ಯಯುಗದ ದ್ವಿತೀಯ ವರ್ಷಾರಂಭಕ್ಕಾಗಿ ತಮ್ಮನಿಂದ ಶುಭಾಶಯಗಳು. ಸ್ವೀಕರಿಸು.

ಬರ್ನಾಡ್‌ಷಾರನ್ನು ಮಾತಾಡಿಸಲಿಕ್ಕಾಗದಿದ್ದರೂ ಕಾಣಲಿಕ್ಕಾಯಿತಲ್ಲ, ಬೇಷ್.

ಇಂದಿನಿಂದ ಮಹಾತ್ಮರ ಚಿತ್ರ ಸ್ಟ್ಯಾಂಪುಗಳ ಮೇಲೆ ಬಂದಿದೆ. ಅದನ್ನು ಶಾಸ್ತ್ರೀಯವಾಗಿ ಕೈಕಾಗದದ ಮೇಲೆಯೇ ಹಚ್ಚಿ ಕಳುಹಿಸಿದ್ದೇನೆ.

ನೀನು ಬರುವುದೆಂದಿಗೆ? ಖಚಿತವಾಗಿ ತಿಳಿಸು. ರಜೆ ತೆಗೆದು ಕೊಂಡು ಊರಿಗೆ ಹೋಗೋಣವೆಂದಿದ್ದೇನೆ—ಆದರೆ ನೀ ಬರುವಾಗ ಇಲ್ಲೇ ಇರಬೇಕೆಂದು ಆಸೆ. ಅದಕ್ಕಾಗಿ ಕೇಳುತ್ತಿದ್ದೇನೆ.

ಹೀಗೆ,

ಶೌರಿ.

—:o:—

## ನಲವತ್ತೈದು

ಕೇಂಬ್ರಿಡ್ಜ್

೨೦-೮-೪೮

ಪ್ರಿಯ ಶೌರಿ :

ನಾನೀಗ ಕೇಂಬ್ರಿಡ್ಜ್‌ನಲ್ಲಿದ್ದೇನೆ. ನಮ್ಮ ಸ್ವಾತಂತ್ರ್ಯದ ವಾರ್ಷಿಕೋತ್ಸವದ ದಿನ ನೆನಪುಮಾಡಿಕೊಂಡು ಕಾಗದ ಬರೆದೆಯಲ್ಲಾ, ಅದು ನನಗೆ ಆನಂದವನ್ನುಂಟುಮಾಡಿತು. ನಿನ್ನ ಇಂಥದೊಂದು ಕಾಗದ ಕೊಲಂಬಿಯಾಕ್ಕೂ ಬಂದಿತ್ತು. ನಮ್ಮ ನಾಡು ಸ್ವತಂತ್ರವಾಗಿ ನಾವು, ಒಂದು '**ರಾಷ್ಟ್ರ**'ವಾದದ್ದು, ಅದೂ ನಮ್ಮ ತಲೆಮಾರಿನಲ್ಲಿಯೇ ಆದದ್ದು ನಮಗೆ ಹೆಮ್ಮೆಯೇ ಸರಿ. ಈ ಇಂಗ್ಲೆಂಡಿನಲ್ಲಿ ತಲೆಯೆತ್ತಿ ಮೆರೆಯುವ ಶಕ್ತಿ ನಮಗೀಗ ಬಂದಿದೆ. ಮುಂದಿನ ವರ್ಷದ ಸ್ವಾತಂತ್ರ್ಯ ದಿನಾಚರಣೆಯ ಹೊತ್ತಿಗೆ ಭಾರತದಲ್ಲೇ ಇರುತ್ತೇನೆ.

ಮೊನ್ನೆ ಲಂಡನ್ನಿನಲ್ಲಿ **ಆಲ್ಬರ್ಟ್** ಹಾಲಿನಲ್ಲಿ ಭಾರಿ ಸಭೆ ನಡೆಯಿತು. ಎಂಟು ಸಾವಿರ ಜನ ನಮ್ಮ ಸಭೆಗೆ ಬಂದಿದ್ದರು. ಸಾವಿರ ಭಾರತೀಯರು ಬಂದಿದ್ದರು. ಸಭಾ ಭವನವನ್ನೆಲ್ಲಾ ರಾಷ್ಟ್ರೀಯ ಬಾವುಟಗಳಿಂದ ಅಲಂಕಾರ ಮಾಡಿದ್ದರು. ನಮ್ಮ ರಾಯಭಾರಿಗಳಾದ ಶ್ರೀ. ವಿ. **ಕೆ. ಕೃಷ್ಣಮೆನನ್**, ಭಾರತದ ವೈಸ್ರಾಯಿಯಾಗಿದ್ದ **ಲಾರ್ಡ್ ಮೌಂಟ್‌ಬೇಟನ್, ಸರ್ ಸ್ಟ್ಯಾಫರ್ಡ್ ಕ್ರಿಪ್ಸ್, ಲಾರ್ಡ್ ಪೆಥಿಕ್ ಲಾರೆನ್ಸ್** ಬಂದಿದ್ದರು. ಸರ್ ಕ್ರಿಪ್ಸ್ ಚೆನ್ನಾಗಿ

ಮಾತನಾಡಿದರು. ಸಭಾ ಭವನ ಸ್ವಾತಂತ್ರ್ಯದ ಜಯ ಘೋಷ ಮಾಡಿ ದಾಗ ಭಾರತೀಯರ ಅನಂದಕ್ಕೆ ಪಾರವೇ ಇರಲಿಲ್ಲ. ಇಷ್ಟೆಲ್ಲಾ ನಾವು ಸಂತೋಷ ಪಡುತ್ತಿರುವಾಗ ಭಾರತೀಯ ಕಮ್ಯೂನಿಸ್ಟ್ ವಿದ್ಯಾರ್ಥಿಗಳು ನೆಹರು ಸರ್ಕಾರವನ್ನು ಟೀಕೆ ಮಾಡುತ್ತಾ, ಸರ್ಕಾರವನ್ನು ಖಂಡಿಸಿ ಬರೆದ ಪುಸ್ತಕಗಳನ್ನು ಹಂಚುತ್ತಿದ್ದರು. ಪರದೇಶಗಳಲ್ಲೂ ಕೂಡ ಈ ರೀತಿ ನಮ್ಮ ದೇಶದ ಬಗ್ಗೆ ಅಪಪ್ರಚಾರ ಮಾಡುತ್ತಿದ್ದು ಈ ಕಮ್ಯೂನಿಸ್ಟ್ ವಿದ್ಯಾರ್ಥಿಗಳನ್ನು ಕಂಡು ನನಗೇಕೊ ಅಸಹ್ಯವಾಯಿತು.

ಇಲ್ಲಿಗೆ ನಾನು ಬೆಳಿಗ್ಗೆ ಬಂದೆ. ಶ್ರೀ. ಭರತರಾಜಸಿಂಗ್ ಮತ್ತು ಶ್ರೀ. ಸಿ. ಡಿ. ನರಶಿಂಹಯ್ಯನವರನ್ನು ಭೇಟಿ ಮಾಡಿದೆ. ನಾನಿಂದು ಅವರ ಅತಿಥಿ. ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯ, ಆಕ್ಸ್‌ಫರ್ಡ್‌ಗಿಂತ ಚೆನ್ನಾಗಿದೆ. ಪ್ರಕೃತಿ ಸೌಂದರ್ಯ ಇಲ್ಲಿ ತುಳುಕುತ್ತಿದೆ. ವಿಶ್ವವಿದ್ಯಾನಿಲಯದ ಕಾಲೇಜುಗಳ ಮಧ್ಯದಲ್ಲಿಯೇ ಸಣ್ಣ ನದಿಯೊಂದು ಹರಿಯುತ್ತದೆ. ಶ್ರೀ. ಸಿಂಗ್ ಅವರ ಕಾಲೇಜಾದ **ಕಿಂಗ್ಸ್** ಕಾಲೇಜಿಗೆ ಕರೆದೊಯ್ದಿದ್ದರು. ಅಲ್ಲಿ **ರುಡ್ಯಾಡ್ರ್ ಕಿಪ್ಲಿಂಗ್** ಸೇತುವೆ ಇದೆ. ಆತ ಅಲ್ಲಿಯೇ ನಿಂತು ಸ್ಫೂರ್ತಿ ಪಡೆದನಂತೆ. ನಾವಿಬ್ಬರೂ ಅಲ್ಲಿ ನಿಂತು ಒಂದು ಸಲ ಕುಣಿದೆವು. ಸ್ಫೂರ್ತಿ ಮಾತ್ರ ಬರಲಿಲ್ಲ. ಪಂಡಿತ ಜವಹರಲಾಲರು ಓದಿದ **ಟ್ರಿನಿಟಿ** ಕಾಲೇಜಿಗೆ ಹೋಗಿದ್ದೆವು. ಅವರು ಓದುತ್ತಿದ್ದ, ವಾಸಿಸುತ್ತಿದ್ದ ಕೊಠಡಿಯನ್ನು ನೋಡಿಕೊಂಡು ಬಂದೆವು.

ನಾನು ಸೆಪ್ಟಂಬರ್ ೨೫ ಕ್ಕೆ **'ಜಲ್ ಅಜಾದ್'** ಎಂಬ ಭಾರತೀಯ ಹಡಗನ್ನು ಹತ್ತಿ ಅಕ್ಟೋಬರ್ ೧೫ರ ವೇಳೆಗೆ ಬೊಂಬಾಯಿಗೆ ಬರುತ್ತೇನೆ. ನೀನು ಆ ಹೊತ್ತಿಗೆ ಅಲ್ಲಿಯೇ ಇರುತ್ತೀಯೇ ತಾನೆ?

ನಾಳೆ ನಾನು **ಫ್ರಾನ್ಸ್** ದೇಶಕ್ಕೆ ಪ್ರಯಾಣ ಮಾಡುತ್ತೇನೆ. **ಪ್ಯಾರಿಸ್ಸಿನಲ್ಲಿ** ಕೆಲವು ದಿನವಿದ್ದು **ಬೆಲ್ಜಿಯಮ್** ದೇಶದ ರಾಜಧಾನಿಯಾದ **ಬ್ರಸ್ಸೆಲ್ಸ್** ಗೆ ತೆರಳುವೆನು. ಅಲ್ಲಿಂದ ಸುಂದರ ನಾಡಾದ

**ಸ್ವಿಟ್ಜರ್ಲೆಂಡಿನಲ್ಲಿ** ವಾರವಿದ್ದು **ಇಟಲಿಗೆ** ಹೋಗಿ ಪುನಃ ಸೆಪ್ಟಂಬರ್ ೨೫ ರ ವೇಳೆಗೆ ಲಂಡನ್ನಿಗೆ ಹಿಂತಿರುಗುತ್ತೇನೆ.

ಪ್ರೀತಿಯಿರಲಿ.

ಇತಿ ಹೀಗೆ,

ನಾಕೃಮೂ.

—:o:—

## ನಲವತ್ತಾರು

ಬೊಂಬಾಯಿ,

೨೨—೮—೪೮.

ಅಣ್ಣ ನಾಡಿಗ :

ನಿನ್ನ ಆಗಸ್ಟ್ ೧೧ ನೆಯ ತಾರೀಖು ಬರೆದ ಕಾಗದ ೧೬ ನೆಯ ತಾರೀಖು ಬಂತು.

ಹದಿನೈದನೆಯ ತಾರೀಖನ್ನು ಹೇಗೆ ಕಳೆದೆ ? ಅಂದು ಲಂಡನ್ನಿನಲ್ಲಿ ಏರ್ಪಡಿಸಿದ್ದ ಕೂಟಗಳಿಗೆಲ್ಲಿಗಾದರೂ ಹೋಗಿ ತ್ರಿವರ್ಣ ಧ್ವಜವನ್ನು ಕಂಡು ಮನ ತಣಿಸಿಕೊಂಡೆಯೋ ?

ಶ್ರೀ. ಭಾಷ್ಯಂ ಬಂದಿದ್ದಾಗ ಅವರಿಗಾಗಿ ಒಂದು ಕೂಟವನ್ನೇರ್ಪಡಿಸಿದ್ದಿರಂತೆ ಲಂಡನ್ನಿನಲ್ಲಿ. ನೀನು ಮುಖ್ಯಪಾತ್ರ ವಹಿಸಿದ್ದೆಯಂತೆ. ಮೈಸೂರು ದೇಶದ ಪತ್ರಿಕೆಗಳಲ್ಲಿ ಈ ಸುದ್ದಿಯನ್ನು ಓದಿದವರು ನನಗೆ ತಿಳಿಸಿದರು. ನೀನಿದನ್ನು ನನಗೆ ಬರೆದೇ ಇಲ್ಲವಲ್ಲ ?

**ಮ್ಯಾಂಚೆಸ್ಟರ್, ಗ್ಲಾಸ್ಗೋ, ಎಡಿಂಬರೋ** ಮುಂತಾದ ಸ್ಥಳಗಳನ್ನು ನೋಡಿ ನಲಿದುದಕ್ಕೆ ಅಭಿನಂದನೆಗಳು. **ನ್ಯೂಕ್ಯಾಸಲ್‌ಗೆ** ಹೋಗುವಾಗ ಕೊಂಚ ಕಲ್ಲಿದ್ದಲು ಹೊತ್ತುಕೊಂಡು ಹೋದೆಯೋ ?

ಭರತರಾಜ ಸಿಂಗ್, ಸಿ. ಡಿ. ನರಸಿಂಹಯ್ಯ ಇವರುಗಳನ್ನು ಕಂಡೆಯೇನು ? ಎಂ. ವಿ. ಕೃಷ್ಣಸ್ವಾಮಿ ನಾಳಿದ್ದು ಮಧ್ಯಾಹ್ನ ಹೊರಡುತ್ತಾನೆ. ಅವನು ಹತ್ತುವ ಹಡಗಿನ ಹೆಸರು **ಎಸ್. ಎಸ್. ರಾಂಚಿ** ಎಂದು. ಅದು **ಟಿಲ್‌ಬರಿ ಡಾಕ್‌ಗೆ** ಸೆಪ್ಟಂಬರ್ ೧೫ ರ ಸುಮಾರಿಗೆ ತಲಪುತ್ತದಂತೆ. ಆ ವೇಳೆಗೆ ನೀನು ಇಂಗ್ಲೆಂಡ್ ದೇಶದಲ್ಲೇ ಇರುತ್ತೀಯೋ ಇಲ್ಲವೋ ತಿಳಿಯದು.

ಕೃಷ್ಣಸ್ವಾಮಿ ಈಗ ನನ್ನ ಜೊತೆಯಲ್ಲೇ ಇದ್ದಾನೆ. ನಮ್ಮ ೨೩, ಹಮಾಂ ಸ್ಟ್ರೀಟ್ ವಠಾರದಲ್ಲೇ ತಂಗಿದ್ದಾನೆ. ೧೬ನೆಯ ತಾರೀಖು ಬಂದ. ಈವತ್ತು ಭಾನುವಾರವಾದ್ದರಿಂದ — ಅಂಚೆ ಕಚೇರಿ ಬಂದ್ ಆದ್ದರಿಂದ — ನಿನಗೆ ಬರೆಯಲು ಈ "ವಿಮಾನ ಕಾಗದ" ವನ್ನು ಅವನಿಂದಲೇ ಪಡೆದುಕೊಂಡೆ. ನಿನಗೆ ತನ್ನ ನಮಸ್ಕಾರಗಳನ್ನು ಹೇಳುವಂತೆ ಇದೇ ಈಗ ಅವನು ಕೂಗಿ ತಿಳಿಸುತ್ತಿದ್ದಾನೆ.

ನಾನು ಸೆಪ್ಟೆಂಬರ್ ೧೫ ರಿಂದ ಒಂದು ತಿಂಗಳು ರಜೆಯ ಮೇಲೆ ಹೋಗುವುದೆಂದು ನಿಶ್ಚಯಮಾಡಿದ್ದೇನೆ.

ನಿನ್ನ ಹಣಕಾಸಿನ ವ್ಯವಸ್ಥೆಯೆಲ್ಲವೂ ಸರಿಹೋಯಿತೆ? ಸಂಜೀವ ಆರೋಗ್ಯ.

ನಿನ್ನವ,
ಶೌರಿ.

—:o:—

## ನಲವತ್ತೇಳು

ಲಂಡನ್,
೧೭—೯—೪೮.

ಸಂಜೀವ :

ಕೃಷ್ಣಕುಂಜದ ಕಣ್ವರುಷಿಗಳು ಕಣ್ಣು ತೆರೆದ ಘಳಿಗೆಗಾಗಿ ತುಂಬಾ ಆನಂದವಾಗಿದೆ. ಅಂತೂ ಬರೆದೇ ಬಿಟ್ಟೆಯಲ್ಲಾ.

ನಿನ್ನೆ ಇಲ್ಲಿ ಕನ್ನಡಿಗರ ಸಭೆಯೊಂದನ್ನು ಸೇರಿಸಿದ್ದೆ. ಸುಮಾರು ಐವತ್ತು ಕನ್ನಡಿಗರು ಬಂದಿದ್ದರು. ಕೇಂಬ್ರಿಡ್ಜ್‌ನಿಂದ ಶ್ರೀ. ಭರತರಾಜ ಸಿಂಗ್ ಬಂದಿದ್ದರು. ಆಕ್ಸ್‌ಫರ್ಡ್‌ನಿಂದ ಶ್ರೀಮತಿ ಶಾರದಾಬಾಯಿ ಬಂದಿದ್ದರು. ಇವರು ಬೆಂಗಳೂರಿನ ಮಹಾರಾಣೀ ಕಾಲೇಜಿನಲ್ಲಿ ಚರಿತ್ರೆಯ ಅಧ್ಯಾಪಕಿ.

ಲಂಡನ್ನಿನ **ಪಿಕೆಡೆಲ್ಲಿ ಸರ್ಕಸ್‌**ನಲ್ಲಿ **ಧಿಲ್‌ಧಾರ್** ಎಂಬ ಹೆಸರಿನ ಉಪಹಾರ ಗೃಹವಿದೆ. ಇದನ್ನು ನಡೆಸಿಕೊಂಡು ಬರುತ್ತಿರುವವರು ಒಬ್ಬ ಕನ್ನಡಿತಿ. ಮೈಸೂರು ಪುಳಿಯೋಗರೆ, ರಸಂ, ಮಜ್ಜಿಗೆ ಹುಳಿ, ಎಲ್ಲಾ ಮಾಡುತ್ತಾರೆ ಇಲ್ಲಿ. ಅಂದು ನಾವೆಲ್ಲ ಸೇರಿಕೊಂಡು ಮನೆ ನೆನಪು ಮಾಡಿಕೊಂಡೆವು.

**'ಕರ್ನಾಟಕ' ಒಂದಾಗಲೆಂದೂ, ಮೈಸೂರು ಕರ್ನಾಟಕದಲ್ಲಿ ವಿಲಯನವಾಗಲೆಂದೂ ಏಕ ಕಂಠದಿಂದ ನಿರ್ಣಯ ಮಾಡಿ ಭಾರತ ರಾಜ್ಯಾಂಗ ಸಭೆಯ ಅಧ್ಯಕ್ಷರಾದ ಡಾ|| ರಾಜೇಂದ್ರ ಪ್ರಸಾದರಿಗೆ ಕೇಬಲ್ ಕಳುಹಿಸಿಕೊಟ್ಟೆವು.**

ಇನ್ನೆಂಟು ದಿನ ಮಾತ್ರ ಪರದೇಶದಲ್ಲಿ. ಅನಂತರ ಪುನಃ ನಿಮ್ಮ ಮಧ್ಯೆ. ನಿನ್ನ ಆಶ್ರಮ ಮೊದಲಿದ್ದ ಹಾಗೆಯೇ ಇರುವುದೇ? ನೋಡುವಾ.

ಪ್ರೀತಿಯಿರಲಿ.

ಇತಿ ಹೀಗೆ,

**ಕೃ.**

—:o:—

## ನಲವತ್ತೆಂಟು

ಲಂಡನ್,

೨೫—೯—೪೮.

ಬೆಳಿಗ್ಗೆ ೯ ಘಂಟೆ.

ಪ್ರಿಯ ಶೌರಿ, ಸಂಜೀವ :

ಈ ದಿನ ಮಧ್ಯಾನ್ಹ ೨ ಘಂಟೆಗೆ ಭಾರತೀಯ ಹಡಗಾದ **'ಜಲ್ ಅಜಾದ್'**ನ್ನು ಹತ್ತಿ ತಾಯ್ನಾಡಿನ ಅಭಿಮುಖವಾಗಿ ಮರಳುವೆನು. ಬೊಂಬಾಯಿಯನ್ನು ಅಕ್ಟೋಬರ್ ೧೫ನೇ ತಾರೀಖು ನಮ್ಮ ಹಡಗು ಮುಟ್ಟುವುದು. ಆ ವೇಳೆಗೆ ನೀ ಬೊಂಬಾಯಿನಲ್ಲಿರುವೆ. ಅಲ್ಲವೇ.

ಲಂಡನ್ನಿನಲ್ಲಿ ನನ್ನ ಕೊನೆಯ ಕಾರ್ಯಕ್ರಮ, ಕನ್ನಡ ನಾಡಿನ ಹಿರಿಯ ನಾಯಕರೊಬ್ಬರನ್ನು ಸತ್ಕರಿಸುವುದೇ ಆಗಿತ್ತು. ಗಾಂಧೀಜಿಯ ನಿಸ್ಸೀಮ ಭಕ್ತರೂ, ಭಾರತದ ನಾಯಕರೂ, ಹಿರಿಯ ಸಾಹಿತಿಗಳೂ, ಆದ **ಶ್ರೀ ರಂಗನಾಥ ರಾಮಚಂದ್ರ ದಿವಾಕರರು,** ರೋಮ್ ನಗರದಲ್ಲಿ ನಡೆದ ಅಂತರ ರಾಷ್ಟ್ರೀಯ ಪಾರ್ಲಿಮೆಂಟರಿ ಸಮ್ಮೇಳನವನ್ನು ಮುಗಿಸಿಕೊಂಡು **ಡಾ|| ಬಾಲಕೃಷ್ಣ ಕೇಸ್ಕರ**ರೊಂದಿಗೆ ಲಂಡನ್ನಿಗೆ ಬಂದಿದ್ದರು. ಈ ಅವಕಾಶವನ್ನು ಉಪಯೋಗಿಸಿಕೊಂಡು ಭಾರತೀಯ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಸತ್ಕಾರಕೂಟವೊಂದನ್ನು ಏರ್ಪಡಿಸಿದ್ದೆವು. ಮೈಸೂರಿನ ಕಲಾವಿದರಾದ **ಶ್ರೀ ನಾಗರಾಜರಾಯರು** ವೀಣೆಯನ್ನು ಬಾರಿಸಿ ಕನ್ನಡಿಗರ ಹೃದಯದ ತಂತಿಯನ್ನೂ ಮಿಾಟಿದರು. ಈ ಸಭೆಗೆ ಬಹಳ ಜನ ಕನ್ನಡಿಗರು ಬಂದಿದ್ದರು. ಬೆಂಗಳೂರಿನಿಂದ **ಡಾಕ್ಟರ್**

**ನಾರಾಯಣ** ಎಂಬುವರು ಅಂದೇ ಭಾರತದಿಂದ ಬಂದಿದ್ದರು. ಮೈಸೂರು ಸಂಸ್ಥಾನದ ವಾಣಿಜ್ಯ ಸಂಘದ ಅಧ್ಯಕ್ಷರಾದ **ಶ್ರೀ. ಜಿ. ಎ. ಆಚಾರ್ಯ ರವರು** ನನಗೆ ಆರ್ಥಿಕ ನೆರವು ನೀಡುವುದಾಗಿ ಹೇಳಿ ಕಳುಹಿಸಿದ್ದರು. ಅಂತೂ ಕೊನೆಯ ಘಳಿಗೆಯಲ್ಲಿ ಕನ್ನಡಿಗರೊಬ್ಬರು ಸಹಾಯ ಹಸ್ತ ನೀಡಿದರು.

ಅಂದು ಸಭೆಯಲ್ಲಿ ಶ್ರೀ ದಿವಾಕರರು " ರಾಷ್ಟ್ರೀಯ ವೃತ್ತದಲ್ಲಿ ಭಾರತದ ಸ್ಥಾನ" ಎಂಬ ಬಗ್ಗೆ ಬಲು ಸ್ವಾರಸ್ಯವಾಗಿಯೂ, ಅರ್ಥಗರ್ಭಿತ ವಾಗಿಯೂ ಮಾತನಾಡಿ ಅಲ್ಲಿ ನೆರೆದಿದ್ದ ಕೆಲವು ಇಂಗ್ಲೀಷರನ್ನು ಆಶ್ಚರ್ಯ ಗೊಳಿಸಿಬಿಟ್ಟರು. ಡಾ|| ಕೇಸ್ಕರರೂ ಕೂಡ ಮಾತನಾಡಿದರು. ಮಧ್ಯೆ ಮಧ್ಯೆ ಶ್ರೀ. ನಾಗರಾಜರಾಯರ ವೀಣೆ ಮತ್ತು ಶ್ರೀ. ವೇಣುಗೋಪಾಲರ ಸಂಗೀತ ಸಭೆಗೆ ಕಳೆಯನ್ನು ಕೊಡುತ್ತಿತ್ತು. ಇಲ್ಲಿ ಇದೇ ನನ್ನ ಕೊನೆಯ ಸಾರ್ವಜನಿಕ ಕೆಲಸ.

ನಮ್ಮಣ್ಣ ಪ್ರಹ್ಲಾದರಾಯರು ಬೊಂಬಾಯಿಗೆ ನನ್ನನ್ನು ಕಾಣಲು ಬರುತ್ತಾರೆ. ಸಂಜೀವನಿಗೆ ಅವರನ್ನು ಉಳಿಸಿಕೊಳ್ಳಲು ಕಾಗದ ಬರೆ ದಿದ್ದೇನೆ.

ಶೌರಿ, ನನ್ನ ಪರದೇಶದ ಪರ್ಯಟನ ಮುಗಿಸಿಕೊಂಡು, ಬಂದ ಕೆಲಸವನ್ನು ಯಶಸ್ವಿಯಾಗಿ ತೀರಿಸಿಕೊಂಡು ನಿನ್ನನ್ನು ಮತ್ತು ಸಂಜೀವ ನನ್ನು ಎಂದಿನಂತೆ ಅಭಿಮಾನ ಪೂರ್ವಕವಾಗಿ ಜ್ಞಾಪಿಸಿಕೊಂಡು ಈ ಕಾಗದ ಬರೆಯುತ್ತಿದ್ದೇನೆ. ನಾನು ಪರದೇಶದಲ್ಲಿದ್ದ ಪರ್ಯಂತವೂ ನೀವು ಮಾಡಿದ ಸಹಾಯಕ್ಕಾಗಿ ನಾನು ಚಿರಋಣಿಯಾಗಿದ್ದೇನೆ, ಎಂದರೆ ನಾನು ನಿಮ್ಮನ್ನು ಹೊಗಳುತ್ತೇನೆಂದು ಖಂಡಿತ ತಿಳಿಯಬಾರದು. ಹೃದಯದಿಂದ ಉಕ್ಕಿ ಬರುವ ಉದ್ಗಾರಗಳನ್ನು ತಡೆ ಹಿಡಿಯಲಾರೆ. ನನ್ನ ಜೀವನದಲ್ಲಿ ನೀವು ಯಾವ ರೀತಿ ಬಂದಿರಿ, ಹೇಗೆ ನನಗೆ ಅನು ಕೂಲವಾದಿರಿ ಎಂಬುದನ್ನು ಜ್ಞಾಪಿಸಿಕೊಂಡಾಗಲೆಲ್ಲಾ " **ದೇವರಿಗೆ ನಮೋ** " ಎನ್ನುತ್ತೇನೆ. **ಜೈಹಿಂದ್.**

ಪ್ರೀತಿಯಿರಲಿ.

ಇತಿ ಹೀಗೆ,

ನಾಡಿಗ ಕೃಷ್ಣಮೂರ್ತಿ.

—:o:—

